# ಸಾಮವೇದ ಸಂಹಿತೆ

## ಋಕ್, ಪದ, ಗಾನ, ಸಾಯಣಭಾಷ್ಯ
## ಕನ್ನಡ ಭಾವಾನುವಾದ, ಪದ್ಯಾನುವಾದ ಸಹಿತ

**ಸಂಪುಟ ೩**

**ಐನ್ದ್ರಮ್ ಕಾಣ್ಡಮ್**

**ಋಕ್ ೨೯೩ ರಿಂದ ೪೬೬**




ದ್ರಾಹ್ಯಾಯಣ ಪ್ರತಿಷ್ಠಾನ ಪ್ರಕಾಶನ

# ಸಾಮವೇದ ಸಂಹಿತೆ

## ಋಕ್, ಪದ, ಗಾನ, ಸಾಯಣಭಾಷ್ಯ
## ಕನ್ನಡ ಭಾವಾನುವಾದ, ಪದ್ಯಾನುವಾದ ಸಹಿತ

### ಸಂಪುಟ ೩

### ಐನ್ದ್ರಮ್ ಕಾಣ್ಡಮ್
### ಋಕ್ ೨೯೩ ರಿಂದ ೪೬೬

---

ದ್ರಾಹ್ಯಾಯಣ ಪ್ರತಿಷ್ಠಾನ ಪ್ರಕಾಶನ

---

# ಸಾಮವೇದ ಸಂಹಿತೆ

## ತೃತೀಯ ಸಂಪುಟ

ಐನ್ದ್ರ ಕಾಂಡ
ಋಕ್ ೨೯೩ ರಿಂದ ೪೬೬

ಸಂಪಾದಕರು ಮತ್ತು ಪ್ರಕಾಶಕರು
ದ್ರಾಹ್ಯಾಯಣ ಪ್ರತಿಷ್ಠಾನ
ನಂ ೮೦೧, ೩ನೆಯ ಮುಖ್ಯ ರಸ್ತೆ,
೪ನೆಯ ಬ್ಲಾಕು, ರಾಜಾಜಿನಗರ, ಬೆಂಗಳೂರು ೧೦
ದೂರವಾಣಿ ೨೩೧೫೩೨೪೪೮

ಪ್ರಥಮ ಮುದ್ರಣ ೨೦೧೦



ಬೆಲೆ ರೂ ೨೫೦/-

# ದ್ರಾಹ್ಯಾಯಣ ಪ್ರತಿಷ್ಠಾನ – ಪರಿಚಯ

ಸಾಮವೇದದ ಅಧ್ಯಯನ ಆಧ್ಯಾಪನ ಇನ್ನೂ ಹೆಚ್ಚಾಗಿ ಬೆಳೆಯಲು ಅನುಕೂಲವಾಗುವಂತೆ ಸಾಮವೇದ ಗ್ರಂಥಗಳನ್ನು ಕನ್ನಡದಲ್ಲಿ ಸಂಪಾದಿಸಿ ಯಥಾಶಕ್ತಿ ಪ್ರಕಟಿಸಿ ಪ್ರಚಾರಮಾಡಬೇಕೆಂಬ ಅಭಿಲಾಷೆಯುಳ್ಳ ಸಾಮವೇದಾಧ್ಯಯನ ಆಸಕ್ತರಿಂದ 'ದ್ರಾಹ್ಯಾಯಣ ಪ್ರತಿಷ್ಠಾನ' ವೆಂಬ ಸಂಸ್ಥೆ ರೂಪುಗೊಂಡಿದೆ. ಸಾಮವೇದದಲ್ಲಿ ಆಸಕ್ತಿ ಇರುವವರೆಲ್ಲರೂ ಯಾವಶುಲ್ಕವೂ ಇಲ್ಲದೆ ಈ ಸಂಸ್ಥೆಯ ಸದಸ್ಯರಾಗಿ ಯಥಾಮತಿ ವೇದಪುರುಷನ ಸೇವೆ ಸಲ್ಲಿಸಬಹುದು.

ಕನ್ನಡ ನಾಡಿನಲ್ಲಿ ಪರಂಪರೆಯಿಂದ ಅಸ್ತಿತ್ವದಲ್ಲಿರುವ ಸಾಮವೇದದ ಓಲೇಗರಿ ಹಾಗೂ ಹಸ್ತ ಲಿಖಿತ ಗ್ರಂಥಗಳು ನಾಗರಿ ಲಿಪಿಯಲ್ಲಿರುವುದೇ ಒಂದು ವೈಶಿಷ್ಟ್ಯ. ಈಗೀಗ ಪ್ರಯೋಗ ಕರ್ತೃಗಳು ಕೆಲವರು ತಮ್ಮ ಸ್ವಂತ ಉಪಯೋಗಕ್ಕಾಗಿ ಕನ್ನಡಲಿಪಿಯಲ್ಲಿ ಬರೆದಿಟ್ಟುಕೊಂಡಿರುವ ಪೂರ್ವಾಪರ ಪ್ರಯೋಗ ಗ್ರಂಥಗಳು ಸಂಕ್ಷಿಪ್ತವಾಗಿದ್ದು ವೈದಿಕ ಪ್ರಕ್ರಿಯೆಗಳ ಪರಿಚಯವಿಲ್ಲದ, ಹೊಸದಾಗಿ ಕಲಿಯ ಬಯಸುವವರಿಗೆ ಉಪಾದೇಯವಾಗಿಲ್ಲ. ಸಾಮವೇದದ ಸಮಗ್ರ ಅಧ್ಯಯನ ಅಧ್ಯಾಪನ ಮಾಡಲಾಶಿಸುವವರು ದೇವನಾಗರಿಲಿಪಿಯಲ್ಲಿರುವ / ಗ್ರಂಥಾಕ್ಷರದಲ್ಲಿರುವ ಮುದ್ರಿತ ಗ್ರಂಥಗಳನ್ನೇ ಆಶ್ರಯಿಸಬೇಕಾಗಿದೆ. ಈ ಗ್ರಂಥಗಳು ಕನ್ನಡಲಿಪಿಯಲ್ಲಿ ಪ್ರಕಟವಾಗಿಲ್ಲದಿರುವದೂ ಕನ್ನಡಿಗ ಸಾಮವೇದಿಗಳು ಅಧ್ಯಯನ ಅಧ್ಯಾಪನಗಳಲ್ಲಿ ಉತ್ಸಾಹ ತಾಳದಿರುವುದಕ್ಕೆ ಒಂದು ಕಾರಣವಾಗಿದೆ. ಈ ಕೊರತೆಯನ್ನು ತುಂಬಬೇಕೆಂಬುದೇ ದ್ರಾಹ್ಯಾಯಣ ಪ್ರತಿಷ್ಠಾನದ ಆಶಯವಾಗಿದೆ.

ಈ ಹಿನ್ನಲೆಯಲ್ಲಿ ನಮಗೆ ಸಿಕ್ಕಿರುವ ನಾಗರೀ ದೇವನಾಗರೀ ಗ್ರಂಥಾಕ್ಷರಗಳ ಓಲೇಗರಿ, ಹಸ್ತಲಿಖಿತ ಹಾಗೂ ಮುದ್ರಿತ ಸಾಮವೇದ ಗ್ರಂಥಗಳಲ್ಲಿ ಕಂಡುಬರುವ ಪಾಠಾಂತರಗಳನ್ನು ಗುರುತಿಸಿ, ವ್ಯತ್ಯಯಗಳನ್ನು ವಿದ್ವಾಂಸರ ಗಮನಕ್ಕೆ ತಂದು, ಅವರ ಸಲಹೆಯಂತೆ ಆಧಾರ ಗ್ರಂಥಗಳ ಸ್ಥಳ ನಿರ್ದೇಶಿಸಿ ಖಚಿತ ಪಾಠವನ್ನು ನಿರ್ಧರಿಸಲಾಗುತ್ತದೆ. ನಿರ್ಧರಿಸಾಲಾಗದ ಅಂಶಗಳು ಆಯಾಗ್ರಂಥಗಳ ಪರಿಶಿಷ್ಟದಲ್ಲಿ ಚರ್ಚೆಗಾಗಿ ಮಂಡಿಸಲ್ಪಡುತ್ತವೆ. ಈ ಪೂರ್ವಸಿದ್ಧತೆಯ ನಂತರ ವೈದಿಕ ಪ್ರಕ್ರಿಯೆಗಳ ಆನುಪೂರ್ವಿಯ ಪರಿಚಯವಿಲ್ಲದೆಯೂ ಕನ್ನಡದಲ್ಲಿ ಸಾಮವೇದ ಸಂಹಿತೆಯನ್ನು ಋಕ್ ಪದ ಗಾನ ಭಾಷ್ಯ ಅರ್ಥ ವಿಶೇಷ ವಿಷಯಗಳನ್ನೂ ಅಭ್ಯಾಸಮಾಡಲು ಪ್ರಯೋಗಗಳನ್ನು ಕಲಿಯಬಯಸುವವರಿಗೆ ಅನುಕೂಲವಾಗುವಂತೆ ಮನ್ತ್ರ, ತನ್ತ್ರ, ಅನುಷ್ಠಾನ ಕ್ರಮಗಳನ್ನೂ ಯಥಾಮತಿ ಸಂಕ್ಷಿಪ್ತವಾಗಿ ಮನ್ತ್ರಾರ್ಥಗಳನ್ನೂ ಪ್ರತೀಕಗಳ ಪರಿಚಯವನ್ನೂ ಸೂಕ್ತ ಟಿಪ್ಪಣಿಗಳನ್ನೂ ಕನ್ನಡದಲ್ಲಿ ಬರೆದು ಯಥಾನುಕೂಲವಾಗಿ ಪ್ರಕಟಿಸುವ ಕೈಂಕರ್ಯವನ್ನು ದ್ರಾಹ್ಯಾಯಣ ಪ್ರತಿಷ್ಠಾನ ನೆರವೇರಿಸುತ್ತಿದೆ.

ಕನ್ನಡ ಭಾಷೆಯಲ್ಲಿ ಪ್ರಪ್ರಥಮವಾಗಿ 'ಸಾಮವೇದ ಪರಿಚಯ', 'ನಿತ್ಯಾಹ್ನಿಕ', 'ಪೂರ್ವ ಪ್ರಯೋಗ', ದ್ರಾಹ್ಯಾಯಣ ಶ್ರಾದ್ಧ ಪ್ರಯೋಗ', 'ಅಪರ ಪ್ರಯೋಗ', 'ಸಾಮವೇದ ಸಂಹಿತೆ – ಒಂದನೆಯ ಸಂಪುಟ' ಎಂಬ ಆರು ಗ್ರಂಥಗಳು ೧/೮ರ ೨೧೫೦ ಪುಟಗಳಲ್ಲಿ ವಿಭಕ್ತವಾಗಿ ೧೯೯೬ ರಿಂದ ಇದುವರೆಗೆ ಪ್ರಕಟವಾಗಿವೆ. ಈ ಗ್ರಂಥಗಳು ಶಾಸ್ತ್ರೀಯವಾಗಿ ಸಂಪಾದಿಸಲ್ಪಟ್ಟು ಮನ್ತ್ರ ಅರ್ಥ ಆಧಾರ ವಿವರಣೆ ಟಿಪ್ಪಣಿಗಳೊಂದಿಗೆ ಕನ್ನಡ ಭಾಷೆಯಲ್ಲಿ ಪ್ರಕಟವಾಗಿರುವದನ್ನು ವಿದ್ವಾಂಸರೂ ವಿದ್ಯಾಸಂಸ್ಥೆಗಳೂ ಸಂಶೋಧನಾನಿರತರೂ ಅಧ್ಯಯನ ಅಧ್ಯಾಪನನಿರತರೂ ಪ್ರಯೋಗಕರ್ತೃಗಳೂ ವೇದದ ಬಗ್ಗೆ ಆಸಕ್ತಿ ಕುತೂಹಲವುಳ್ಳವರೂ ಸ್ವಾಗತಿಸಿ ಆದರದಿಂದ ಬರಮಾಡಿಕೊಂಡಿದ್ದಾರೆ. ಇದೀಗ ಸಾಮವೇದ ಸಂಹಿತೆಯ ದ್ವಿತೀಯ ಸಂಪುಟವಾಗಿ ಐನ್ದ್ರಕಾಂಡ ಪ್ರಥಮ ಭಾಗವನ್ನು ಪ್ರಕಟಿಸಿ ನಮ್ಮ ಸಮಾಜಕ್ಕೆ ಬಹುನಮ್ರತೆಯಿಂದ ಅರ್ಪಿಸಲಾಗಿದೆ.

'ಯಜ್ಞಾರ್ಥಾತ್ ಕರ್ಮಣೋನ್ಯತ್ರ . . . । 'ಕರ್ಮಬ್ರಹ್ಮೋದ್ಭವಂ ವಿದ್ಧಿ . . . । 'ಕರ್ಮಣೈವ ಹಿ ಸಂಸಿದ್ಧಿಮ್ . . . ' – ಛಾಂ.ಉ. ೫.೧೦.೬–೮, ಬೃ.ಉ ೬.೨.೧೬, ಭ.ಗೀ. ೩.೯, ೧೫.೨೦ ॥ ಇತ್ಯಾದಿ ಉಪದೇಶಗಳನ್ನು ಸ್ಮರಿಸಿ, ಮನ್ತ್ರಾರ್ಥಗಳನ್ನು ತಿಳಿದು, ಶ್ರದ್ಧಾ ಭಕ್ತಿಗಳಿಂದ ವಿಧ್ಯುಕ್ತವಾಗಿ ಆಚರಿಸುವ ಕರ್ಮ ವೀರ್ಯವತ್ತಾಗಿ ಸಮೃದ್ಧ ಫಲವನ್ನು ಪಡೆಯಲು ಕರ್ತೃವಿಗೆ ನೆರವಾಗುವುದೇ ದ್ರಾಹ್ಯಾಯಣ ಪ್ರತಿಷ್ಠಾನದ ಧ್ಯೇಯವಾಗಿದೆ.

ಯುಗಾದಿ
ಶ್ರೀ ವಿಕೃತಿ ಸಂವತ್ಸರ
೧೬–೦೩–೨೦೧೦

ಟಿ. ಗೌರೀಪತಿ
ಅಧ್ಯಕ್ಷರು
ದ್ರಾಹ್ಯಾಯಣ ಪ್ರತಿಷ್ಠಾನ

# ಸಂಪಾದಕರ ಬಿನ್ನಹ

ಇದೀಗ ಸಾಮವೇದ ಸಂಹಿತೆಯ ತೃತೀಯ ಸಂಪುಟ ಐನ್ದ್ರಕಾಂಡ ಪ್ರಥಮ ಭಾಗವನ್ನು ನಮ್ಮ ಸಮಾಜಕ್ಕೆ ಅರ್ಪಿಸಲು ಸಂತೋಷವಾಗುತ್ತಿದೆ. ಆಗ್ನೇಯಕಾಂಡವೆಂಬ ಹಿಂದಿನ ಪ್ರಥಮ ಸಂಪುಟದಂತೆಯೇ ಋಕ್ ಪದ ಗಾನ ಸಾಯಣಭಾಷ್ಯ ಕನ್ನಡದಲ್ಲಿ ಪ್ರತಿಪದಾರ್ಥ ವಿಶೇಷ ವಿಷಯಗಳು ಭಾವಾರ್ಥ ಕನ್ನಡದ ಪದ್ಯ ಸಹಿತ ಈ ಸಂಪುಟಗಳಲ್ಲಿ ರೂಪುಗೊಂಡಿವೆ. ಹಿಂದಿನ ಸಂಪುಟಗಳನ್ನು ಬೆಳಕಿಗೆ ತರಲು ಸಹಕಾರ ನೀಡಿರುವ ಮಹಾನುಭಾವರೆಲ್ಲರೂ ಅದೇ ಭಕ್ತಿ ಶ್ರದ್ಧೆ ಉದಾರತೆಯಿಂದ ಈ ಸಂಪುಟದ ಕೈಂಕರ್ಯವನ್ನೆಸಗಿದ್ದಾರೆ. ಹಿಂದಿನ ಸಂಪುಟದಲ್ಲಿನ ಮನ್ತ್ರಗಳ ಸಾರಸರ್ವಸ್ವವನ್ನು ಕನ್ನಡ ಪದ್ಯಗಳಲ್ಲಿ ಹಿಡಿದಿಟ್ಟಿರುವ ಶತಾವಧಾನಿ ಡಾ. ಆರ್. ಗಣೇಶ್‌ರವರೇ, ಈ ಸಂಪುಟದ ಮನ್ತ್ರಗಳ ಹಿರಿದರ್ಥಗಳನ್ನೂ ಪುಟ್ಟಪುಟ್ಟ ಕನ್ನಡ ಪದ್ಯಗಳೆಂಬ ನಕ್ಷತ್ರಪುಂಜಗಳಲ್ಲಡಗಿಸಿ ಕನ್ನಡಿಗರ ಮನೆಯಂಗಳದಲ್ಲಿ ಪ್ರಪ್ರಥಮವಾಗಿ ಪ್ರತಿಷ್ಠಿಸಿ ವೇದಪುರುಷನ ಆರಾಧನೆಗೆ ಅನುವು ಮಾಡಿಕೊಟ್ಟಿದ್ದಾರೆ. ಋಷಿಸ್ವರೂಪವಾದ ಈ ಎಲ್ಲಾ ಮಹಾಮನಸ್ಸಿನವರಿಗೆ ವೇದಪುರುಷನು ಶಾಂತಿಸಮೃದ್ಧಿಯನ್ನು ನೀಡಿ ತನ್ನ ಕೃಪೆಯನ್ನು ಮಳೆಗರೆಯುತ್ತಲಿರಲೆಂದು ಮುಡಿಚಾಚಿ ಪ್ರಾರ್ಥಿಸುತ್ತೇವೆ.

ಯುಗಾದಿ
ಶ್ರೀ ವಿಕೃತಿ ಸಂವತ್ಸರ
೧೬-೦೩-೨೦೧೦

ಸಂಪಾದಕ ಮಂಡಲಿ
ದ್ರಾಹ್ಯಾಯಣ ಪ್ರತಿಷ್ಠಾನ

## ಋಕ್ - ೨೯೩

ವಸಿಷ್ಠೋ ಮೈತ್ರಾವರುಣಿಃ । ಬೃಹತೀನ್ದ್ರಃ ॥

೩ ೧ ೨೦ ೩ ೧ ೨ ೩ ೧ ೨
ಇಮ ಇನ್ದ್ರಾಯ ಸುನ್ವಿರೇ ಸೋಮಾಸೋ ದಧ್ಯಾಶಿರಃ ।

೧ ೨೦ ೩ ೨ ೩ ೧ ೨ ೩ ೨ ೩
ತಾ ಆ ಮದಾಯ ವಜ್ರಹಸ್ತ ಪೀತಯೇ ಹರಿಭ್ಯಾಂ ಯಾಹ್ಯೋಕ

೨
ಆ ॥ ೧.೨೯೩ ॥

೩ ೨ ೧ ೨೦ ೩ ೧ ೨೦ ೧ ೨೦ ೧ ೨೦ ೩
ಇಮೇ - ಇನ್ದ್ರಾಯ - ಸುನ್ವಿರೇ । ಸೋಮಾಸಃ - ದಧ್ಯಾಶಿರಃ - ದಧಿ - ಆಶಿರಃ ॥

೨ ೧ ೨೦ ೩ ೧ ೨ ೧ ೨೦
ತಾನ್ - ಆ - ಮದಾಯ - ವಜ್ರಹಸ್ತ - ವಜ್ರ - ಹಸ್ತ - ಪೀತಯೇ । ಹರಿಭ್ಯಾಂ

೩ ೧ ೨೦
- ಯಾಹಿ - ಓಕಃ - ಆ ॥ ೧.೨೯೩ ॥

ಸೌಭರಮ್ । ಸುಭರಿರ್ಬೃಹತೀನ್ದ್ರಃ ॥

೩ ೨ ೫೦ ೫
೨೯೩.೧. ಇಮಾ೩ಹಿಇ । ಇಮಇ । ದ್ರಾಯಸುನ್ವಾ೬ಇರಾಇ ॥

೧೧ ೦ ೦ ೦ ೨೦ ೧೧ ೦
ಸೋಮಾಸೋದಧ್ಯಾಶಿರಾಃ । ತಾ ಆಮದಾಯವಜ್ರ

೦ ೧ ೦
ಹಸ್ತಪೀತಾಯಾಇ ॥ ಹರಾ೩೨೩ಹೋ । ಭ್ಯಾಂಯಾ೩೨೩

೧ ೨ ೧ ೧ ^ ೩ ೫೦ ೦
**ಹೋ॥ ಹಿಯೋ ೨೩ । ಕಾ ೨ಆ ೨೩ಳಔಹೋವಾ ॥**

೩ ೫
**ಊ ೨೩ಳಪಾ ॥**

*ದೀ - ೧೨ । ಪ - ೧೦ । ಮಾ - ೯ । ಇಶ್ಲೋ । ೧೪ । ೫೦೬ ॥*

ಹೇ **ವಜ್ರಹಸ್ತ! ದಧ್ಯಾಶಿರಃ** ದಧಿಮಿಶ್ರಣಾಃ **ಇಮೇ ಸೋಮಾಸಃ** ಸೋಮಾಃ **ಇನ್ದ್ರಾಯ** ತುಭ್ಯಂ **ಸುನ್ವಿರೇ** ಸುತಾಬಭೂವುಃ । **ತಾನ್** ಸೋಮಾನ್ **ಮದಾಯ** ಮದಾರ್ಥಂ **ಪೀತಯೇ** ಪಾನಾಯ **ಓಕೋ** ಯಜ್ಞ ಸದನಮ್ **ಆ** ಅಭಿ **ಹರಿಭ್ಯಾಂ** ಅಶ್ವಾಭ್ಯಾಂ **ಆಯಾಹಿ** ಆಗಚ್ಛ ॥

**ವಜ್ರಹಸ್ತ** ವಜ್ರಃಶಾಸಃ - *ಶ.೩.೮.೧.೫* ॥ ಶಾಸನದಂಡ ಧರಿಸಿರುವವನೇ, ವಜ್ರಹಸ್ತನೇ, **ದಾಧ್ಯಾಶಿರಃ** ದಧ್ಯಜ್‌ಪ್ರತ್ಯಕ್ತೋ ಧ್ಯಾನಮಿತಿ ಪ್ರತ್ಯಕ್ತಮಸ್ಮಿನ್ ಧ್ಯಾನಮಿತಿ ವಾ - ನಿರು.*೧೨.೩೪* ॥ **ಆಶೀರಾಶ್ರಯಣಮ್** ನಿರು.೬.೮ ॥ ಮೊಸರು ಮಿಶ್ರಿತವಾದ, **ಇಮೇ ಸೋಮಾಃ** ಈ ಸೋಮರಸವನ್ನು, **ಇನ್ದ್ರಾಯ** ಇನ್ದ್ರಭಗವಂತನಿಗಾಗಿ, **ಸುನ್ವಿರೇ** ಶಾಸ್ತ್ರೋಕ್ತರೀತಿಯಲ್ಲಿ ಸಿದ್ಧಮಾಡಿಟ್ಟಿದೆ, **ತಾನ್** ಇಂತಹ ಸೋಮರಸವನ್ನು, **ಮದಾಯ** ಸಂತೋಷಕ್ಕಾಗಿ, **ಪೀತಯೇ** ಪಾನಮಾಡಲು, **ಓಕಃ** ಓಕ ಇತಿ ನಿವಾಸನಾಮ - ನಿರು.*೩.೩* ॥ ಯಜ್ಞಶಾಲೆಗೆ, ನನ್ನ ಹೃದಯ ಮಂದಿರಕ್ಕೆ, **ಹರಿಭ್ಯಾಮ್** ದುಃಖ ಅಜ್ಞಾನ ಅಪಹರಣಶೀಲ, ಸುಖಆಹರಣಶೀಲ, ಜ್ಯೋತಿ ಹಾಗೂ ಆನಂದಸ್ವರೂಪದಿಂದ, ಸುತ್ತಿ ಬಳಸಿ ಅಥವಾ ನೇರ ಮಾರ್ಗದಿಂದ ಹರಿನಾಮಕ ಕುದುರೆಗಳ ರಥದಲ್ಲಿ, **ಆ ಆಯಾಹಿ** ಅಭಿಮುಖವಾಗಿ ದಯಮಾಡು.

ದಂಡಧರನಾದ ಇನ್ದ್ರಭಗವಂತನೇ ದುಃಖವನ್ನು ಪರಿಹರಿಸಿ ಸಂತೋಷ ವನ್ನುಂಟು ಮಾಡಲು ನನ್ನ ಹೃದಯ ಮಂದಿರಕ್ಕೆ ಯಜ್ಞಶಾಲೆಗೆ

ಬಿಜಯ ಮಾಡಿ ನಿನಗಾಗಿ ಸಿದ್ಧಮಾಡಿಟ್ಟಿರುವ ದಧಿಮಿಶ್ರಿತ ಸೋಮರಸವನ್ನು ಆನಂದರಸವನ್ನು ಪಾನಮಾಡು.

*ದಂಡಧರನಪ್ಪ ಮಘವಂತನೇ! ದುಃಖಹರನೇ!*
*ಖೇದಮಂ ತೊಡೆದು ಸಮ್ಮೋದಮಂ ನೀಡಲೆಂದು*
*ಎನ್ನ ಹೃದಯೋಪಮಂ ತಾನಪ್ಪ ಸವನಕುಟಿಯೊಳ್*
*ಬಂದು ಸವಿಯಯ್ ಸೋಮಮಂ ಮೊಸರೊಡಂ ಕೂರ್ಮೆಯಿಂ ॥*

## ಋಕ್ - ೨೯೪

ವಾಮದೇವೋ ಗೌತಮಃ । ಬೃಹತೀನ್ದ್ರಃ ॥

೩ ೧ ೨ ೩ ೧ ೨ ೩ ೧ ೨ ೩ ೧ ೨
ಇಮ ಇನ್ದ್ರ ಮದಾಯ ತೇ ಸೋಮಾಶ್ಚಿಕಿತ್ರ ಉಕ್ಥಿನಃ ।
೧ ೨ ೩ ೧ ೨೦ ೩ ೧ ೨ ೩ ೧ ೨ ೩ ೧ ೨
ಮಧೋಃ ಪಪಾನ ಉಪ ನೋ ಗಿರಃ ಶೃಣು ರಾಸ್ವ ಸ್ತೋತ್ರಾಯ
ಗಿರ್ವಣಃ ॥ *೨.೨೯೪ ॥*

೩ ೨ ೩ ೧ ೨೦ ೩ ೧ ೨೦ ೩ ೧ ೨ ೧
ಇಮೇ - ಇನ್ದ್ರ - ಮದಾಯ - ತೇ । ಸೋಮಾಃ - ಚಿಕಿತ್ರೇ - ಉಕ್ಥಿನಃ ॥ ಮ
೨೦ ೩ ೨ ೧ ೨೦ ೩ ೧ ೨೦ ೩ ೧ ೨೦ ೩ ೧ ೨ ೩
ಧೋಃ - ಪಪಾನಃ - ಉಪ - ನಃ - ಗಿರಃ - ಶೃಣು । ರಾಸ್ವ - ಸ್ತೋತ್ರಾಯ - ಗಿ
ರ್ವಣಃ - ಗಿಃ - ವನಃ ॥ *೨.೨೯೪ ॥*

ಗಾರ್ತ್ಸಮದಮ್ । ಗೃತ್ಸಮದೋ ಬೃಹತೀನ್ದ್ರಃ ॥

೪ ೦ ೪ ೧೦ ೦
೨೯೪.೧. ಇಮಇನ್ದ್ರಾ೨ಶಿಮದಾಯತಾಇ ॥ ಸೋಮಾಶ್ಚಿಕಿತ್ರಉಕ್ಥಿ

೨ — ೧ — ೧ ೦
ನಾಃ । ಮೂ೨೧ಧೋ೨೨ ೧ ಪಾಪಾ೨೨ । ನಉಪನೋಗಿ

೨ — ೦ ೧ ೨ ೧
ರಾಃಶಾ೨೧ರ್ಣೂ೯೨೨ ॥ ರಾಸ್ವಸ್ತೋ೨೨೩ತ್ರಾ ॥ ಯಗಿ

೨ ೧
ರ್ವಾ೯೨೨೩ಣಾ೨೩೪೩: । ಓ೨೨೩೪೫ಇ ॥ ಡಾ ॥

ದೀ - ೫ / ಪ - ೮ / ಮಾ - ೭ / ಚೇ / ೧೫ / ೫೦೭ //

ಹೇ ಇನ್ದ್ರ! ತೇ ತವ **ಮದಾಯ** ಮದಾರ್ಥಮ್ **ಉಕ್ಥಿನಃ** ಸ್ತೋತ್ರ ಯುಕ್ತಾಃ **ಇಮೇ** ಸೋಮಾಃ **ಚಿಕಿತ್ರೇ** ಜ್ಞಾಯನ್ತೇ ದೃಶ್ಯನ್ತೇ ಕಿತಜ್ಞಾನೇ । ಕರ್ಮಣಿ ಲಿಟ್ । ಇರಯೋರೇ ಇತಿ ರೇ ಇತ್ಯಾದೇಶಃ ಕಿಂಚ । **ಮಧೋಃ** ಮದಕರಸ್ಯ ಕರ್ಮಣಿ ಷಷ್ಠೀ ಮದಕರ ಸೋಮಂ **ಪಪಾನಃ** ಅತ್ಯರ್ಥಂ ಪಿಬನ್ ಅಸ್ಮಾಕಂ **ಗಿರಃ** ಸ್ತೋತ್ರರೂಪಾವಾಚಃ **ಉಪಶ್ರುಣು** ಸಮ್ಯಕ್ ಶ್ರುಣು । **ಗಿರ್ವಣೋ** ಗೀರ್ಭಿರ್ವನನೀಯ! ಹೇ ಇನ್ದ್ರ! **ಸ್ತೋತ್ರಾಯ** ಸ್ತೋತ್ರ ಕರ್ತ್ರೇ ಮಹ್ಯಂ **ರಾಸ್ವ** ಅಭೀಷ್ಟಂ ದೇಹಿ ॥

**ಇನ್ದ್ರ** ಇನ್ದ್ರಭಗವಂತನೇ, **ತೇ ಮದಾಯ** ನಿನ್ನನ್ನು ಮುದಗೊಳಿಸಲು, **ಉಕ್ಥಿನಃ** ಪ್ರಶಂಸಕರವಾದ ಸ್ತೋತ್ರಗಳೊಂದಿಗೆ, **ಇಮೇ ಸೋಮಾಃ** ಈ ಸೋಮರಸವನ್ನು, **ಚಿಕಿತ್ರೇ** - ರೋಗ ದೂರವನ್ನಾಗಿ ಸಿದ್ಧಪಡಿಸಿದೆ, **ಮಧೋಃ** ಸ್ವಾದಿಷ್ಟವಾದ ಆನಂದದಾಯಕವಾದ ಈ ಸೋಮವನ್ನು, **ಪಪಾನಃ** ಪಾನ ಮಾಡಿ, **ಗಿರಃ** ನಮ್ಮ ಸ್ತುತಿಯನ್ನು, **ಶ್ರುಣು** ಆಲಿಸು, **ಗಿರ್ವಣಃ ಸ್ತೋತ್ರಾಯ**

ಸ್ತುತಿಸುವ ನಾವು ಸ್ತೋತ್ರಗಳಿಗೆ, ಆತ್ಮಾ ವೈ ಸ್ತೋತ್ರಮ್ ಶ. ೫.೨.೨.೨., ಅಭೀಷ್ಟ ಫಲವನ್ನೂ, ಆನಂದವನ್ನೂ ಆತ್ಮದರ್ಶನ ಲಾಭವನ್ನೂ, ರಾಷ್ಟ್ರ ಅನುಗ್ರಹಿಸು.

ಇನ್ದ್ರ, ಭಗವಂತನೇ ನಿನ್ನನ್ನು ಆನಂದಪಡಿಸಲು ಶಾಸ್ತ್ರೋಕ್ತ ಸ್ತೋತ್ರಗಳೊಂದಿಗೆ ಈ ಸೋಮರಸವನ್ನು ರೋಗ ದೂರವಾಗಿರುವಂತೆ ವಿಧಿಪೂರ್ವಕವಾಗಿ ಸಿದ್ಧಪಡಿಸಿಟ್ಟಿದೆ. ಆನಂದದಾಯಕವಾದ ಈ ಸೋಮರಸವನ್ನು ಸೇವಿಸಿ ನಮ್ಮ ಸ್ತೋತ್ರವನ್ನಾಲಿಸಿ ಅಭೀಷ್ಟ ಫಲವನ್ನೂ ಆತ್ಮದರ್ಶನವನ್ನೂ ಅನುಗ್ರಹಿಸು.

ಪುರುಹೂತ! ನಿನ್ನನಾನಂದಗೊಳಿಸಲ್ಕೆ ವಿಧಿಯಿಂ
ನೀರೋಗಮಪ್ಪ ಸೋಮಾಹುತಿಯನಣಿಮಾಡಿದೆಂ ।
ಹರ್ಷವರ್ಷದಮೆನಿಪ್ಪೀ ಸೋಮಮಂ ಸವಿದು ನೀಂ
ಕೇಳ್ದೆಮ್ಮ ನುತಿಗಳಂ ನೀಡಯ್ ನಿಜೇಪ್ಸಿತಾರ್ಥಂ ॥

## ಋಕ್ - ೨೯೫

ಮೇಧಾತಿಥಿ - ಮೇಧ್ಯಾತಿಥೀ ಕಾಣ್ವೌ ವಿಶ್ವಾಮಿತ್ರ ಇತ್ಯೇಕೇ ಬೃಹತೀನ್ದ್ರಃ ॥

೨ ೧೨೩ ೧ ೨ ೩ ೧ ೨ ೩ ೧ ೨
ಆ ತ್ವಾ೩ದ್ಯಸಬರ್ದುಘಾ ಹುವೇ ಗಾಯತ್ರವೇಪಸಮ್ ।
೧ ೨ ೩ ೨ ೩ ೨ ೩ ೨ ೩ ೧ ೨ ೩ ೧ ೨ ೩ ೧
ಇನ್ದ್ರಂ ಧೇನುं ಸುದುಘಾಮನ್ಯಾಮಿಷಮುರುಧಾರಾಮರಙ್ಕೃ
೨
ತಮ್ ॥ ೩.೨೯೫ ॥

೩ ೨ ೩ ೨ ೩ ೧ ೨ ೩ ೧ ೨ಂ ೩ ೨
ಆ - ತು - ಅದ್ಯ - ಅ - ದ್ಯ - ಸಬರ್ದುರ್ಘಾಂ - ಸಬಃ - ದುಘಾಮ್ । ಹುವೇ

೩ ೧ ೨ ೩ ೨ ೩ ೧ ೨ಂ ೩ ೨ ೩
- ಗಾಯತ್ರವೇಪಸಮ್ - ಗಾಯತ್ರ - ವೇಪಸಂ ॥ ಇನ್ದ್ರಂ - ಧೇನುಮ್ - ಸು

೧ ೨ ೩ ೧ ೨ಂ ೧ ೨ಂ ೧ ೨ಂ ೩ ೧ ೨ ೩ ೨ ೩
ದುಘಾಂ - ಸು - ದುಘಾಂ - ಅನ್ಯಾಂ - ಇಷಂ । ಉರುಧಾರಾಂ - ಉರು - ಧಾ

೧ ೨ ೩ ೧ ೨ಂ
ರಾಮ್ - ಅರಙ್ಕೃತಂ - ಅರಂ - ಕೃತಮ್ ॥ ೩.೨೯೫ ॥

ವಾಚಸ್ಸಾಮ । ವಾಗ್ಬೃಹತೀನ್ದ್ರಃ ॥

೫೦ ೦ ೫ ೨ ೧ ೨ಂ
೨೯೫.೧. ಆತ್ವದ್ಯಾಸಾ೭ಬರ್ದುರ್ಘಾಮ್ ॥ ಹುವಾಇಗಾ೨ಯ

೧ ೨ಂ ೧ ೨ ೨ ೧
ತ್ರವೇ೨ಪಸಮ್ । ಆಇನ್ದ್ರಾನ್ಧೇ೩ನೂಮ್ । ಸುದು

೨೦ ೧ ಅ ^ ೩ ೫ ೨
ಘಾಮ್ । ಆ । ನಿಯಾ೨ಮಾ೨೩೪ಇಷಾಮ್ ॥ ಉ

೧ ೨ ೧ ೨
ರುಧಾ೨೩ರಾಮ್ ॥ ಅರಂಕಾ೨೩ರ್ತಾ೩೪೩ಮ್ ।

೧
ಓ೨೩೪೫ಇ ॥ ಡಾ ॥

ದೀ - ೫ । ಪ - ೧೦ । ಮಾ - ೧೧ । ಮ । ೧೬ । ೫೦೮ ॥

ಅನಯೇನ್ದ್ರಂ ಧೇನುರೂಪೇಣ ವೃಷ್ಟಿರೂಪೇಣ ಚ ನಿರೂಪಯನ್ ಸ್ತೌತಿ । **ಅದ್ಯ** ಇದಾನೀಂ **ಧೇನುಮ್** ಧೇನುರೂಪಮಿನ್ದ್ರಂ **ನು** ಕ್ಷಿಪ್ರಂ **ಆಹುವೇ** ಆಹ್ವಯೇ । ಕೀದೃಶೀಂ ಧೇನುಮ್? **ಸಬರ್ದುಘಾಂ** ಪಯಸೋ

ದೋಗ್ಧ್ರೀಂ **ಗಾಯತ್ರವೇಪಸಂ** ಪ್ರಶಸ್ಯವೇಗಾಂ । **ಸುದುಘಾಂ** ಸುಖೇನ ದೋಗ್ಧುಂ ಶಕ್ಯಾಮ್ । **ಅನ್ಯಾಂ** ಉಕ್ತವಿಲಕ್ಷಣಾಂ **ಉರುಧಾರಾಂ** ಬಹೂದಕ ಧಾರಾಂ **ಇಷಮ್** ಏಷಣೀಯಾಂ ವೃಷ್ಟಿಂ ಲಿಂಗವ್ಯತ್ಯಯಃ ಏತದ್ರೂಪೇಣ ವರ್ತಮಾನಮ್ **ಅರಙ್ಕೃತಮ್** ಅಲಂಕರ್ತಾರಮ್ ಪರ್ಯಾಪ್ತಕಾರಣಂ ವೇನ್ದ್ರಂ ಚಾಹ್ವಯೇ ॥

ಇನ್ದ್ರ ಪರಮೈಶ್ವರ್ಯಶಾಲಿಯಾದ ಇನ್ದ್ರಭಗವಂತನೇ, ಸಬರ್ದುಘಾಮ್ ಸಬರಿತ್ಯಮೃತ ನಾಮ । ಸಬಃ ಅಮೃತಂ ಯಾ ದುಹ್ಯತಿ ಸಾ ಸಬರ್ದುಘಾ । **ತಾಮ್ ದೋಗ್ಧ್ರೀಭಿತ್ಯರ್ಥಃ** ಬಹು ಪ್ರಮಾಣದಲ್ಲಿ ಅಮೃತರೂಪೀ ಹಾಲು ನೀಡುವ, ಗಾಯತ್ರ **ವೇಪಸಮ್** ಗಾಯತ್ರಮ್, ಸ್ತೋತ್ರಮ್ ತಸ್ಯ ವೇಪ ಸಮ್, ವೇಪಸ ಕರ್ಮನಾಮ - ನಿ.ಘಂ.೨.೧ ॥ ತಸ್ಯ ವೇಪಸಮ್ ಕರ್ಮ ಭೂತಮ್, ಕಾಮನೆಗಳ ಮಳೆಗರೆಯುವವನೆಂದೇ ಹೊಗಳಿಸಿಕೊಂಡಿರುವ ಬಹುವೇಗವುಳ್ಳ, **ಅದ್ಯ** ಇಂದಿನ ಯಾಗದ ಅಹಸ್ಸಿನಲ್ಲಿ ಈಗ, **ಸುದುಘಾಮ್** ಪರಸ್ಪರ ನೋವಿಲ್ಲದೆ ನಿರಾಳವಾಗಿ ಹಾಲು ಹಿಂಡಲು ಸಾಧ್ಯವಾದ, **ಅನ್ಯಾಮ್** ವಿಲಕ್ಷಣ ರೀತಿಯ ವರ್ಣನೆಗೆ ಮೀರಿದ, **ಉರುಧಾರಾಮ್** ವೃಷ್ಟಿ ಲಕ್ಷಣವಾದ ಹಾಲಿನ ಧಾರೆಯನ್ನು ಸುರಿಸುವ ಮೊಲೆಗಳನ್ನುಳ್ಳ, **ಧೇನುಮ್** ಎಳೆಗರುವಿನ ತಾಯಿಯಾದ ಹಸುವನ್ನು, **ಇಷಮ್** ಎಲ್ಲರಿಗೂ ಇಷ್ಟವಾದ ವೃಷ್ಟಿರೂಪ ವಾದ, **ಅರಂಕೃತಮ್** ಅಲಂಕೃತವಾಗಿ ಶೋಭಾಯಮಾನವಾಗಿ, ಕಾಮನಾ ವೃಷ್ಟಿಸು ವವನಾಗಿ, **ತು ಆಹುವೇ** ಕೂಡಲೇ ಆಹ್ವಾನಿಸುವೆನು.

ಅಮೃತಸ್ವರೂಪವಾದ ಹಾಲನ್ನು ಅಧಿಕವಾಗಿ ಪರಸ್ಪರ ನೋವಿಲ್ಲದೆ ನೀಡುವ ಎಳೆಗರುವಿನ ತಾಯಿಯಾದ ಸಾಧುವಾದ ಹಸುವಿನಂತಿರುವ ಜಗತ್ತಿಗೆ ಸುಭಿಕ್ಷವನ್ನೂ ಸಂತೃಪ್ತಿಯನ್ನೂ ಶೋಭೆಯನ್ನೂ ತಂದುಕೊಡುವ ವೃಷ್ಟಿ ಕಾರಕನಾದ ಕಾಮನೆಗಳ ಮಳೆಯನ್ನೇ ಸುರಿಸುವ ವಿವಿಧ ಅಲಂಕಾರಗಳಿಂದ

ಶೋಭಾಯಮಾನನಾದ ಇನ್ದ್ರಭಗವಂತನು ಇಂದಿನ ಯಾಗದ ಆಹಸ್ಸಿನಲ್ಲಿ ಬಿಜಯ ಮಾಡಬೇಕೆಂದು ಸ್ತುತಿಸುವೆ ಆಹ್ವಾನಿಸುವೆ.

ಚೊಚ್ಚಲ್ಕರುವಿಗೊಲ್ದು ಸುಧೆಯೆರೆವ ತಾಯಿ ಗೋವಂ
ಪ್ರೋಲ್ವ ದೇವನೆ! ಜಗತ್ಸೌಭಾಗ್ಯವೀವ ವಿಭುವೇ!
ವರವೃಷ್ಟಿಯಿಂ ಕರೆವ ಸಾಲಂಕೃತನೆ! ನಿನ್ನನೀ
ಜನ್ನಕಾಹ್ವಾನಿಪೆಂ; ಸ್ವೀಕರಿಪ್ರುದಾಹುತಿಗಳಂ ॥

## ಋಕ್ ೨೯೬

ನೌಧಾಗೌತಮಃ । ಬೃಹತೀನ್ದ್ರಃ ॥

೧ ೨ ೩ ೨ ೩ ೧ ೨ ೩ ೧ ೨ ೩ ೧ ೨
ನ ತ್ವಾ ಬೃಹನ್ತೋ ಅದ್ರಯೋ ವರನ್ತ ಇನ್ದ್ರ ವೀಡವಃ ।

೧ ೨ರ ೩ ೧ ೨ರ ೩ ೨ ೩ ೨ ೩ ೧ ೨ರ
ಋಚ್ಛಿಕ್ಷಸಿ ಸ್ತುವತೇ ಮಾವತೇ ವಸು ನ ಕಿಷ್ಟದಾಮಿನಾತಿ ತೇ ॥

೨ ೩ ೧ ೨ ೧ ೨ರ ೩ ೧ ೨ರ ೩ ೧
ನ - ತ್ವಾ - ಬೃಹನ್ತಃ - ಅದ್ರಯಃ - ಅ - ದ್ರಯಃ । ವರನ್ತೇ - ಇನ್ದ್ರ - ವೀಡ

೨ ೧ ೨ರ ೩ ೨ ೧ ೨ರ ೧ ೨ರ ೩ ೨
ವಃ ॥ ಯತ್ - ಶಿಕ್ಷಸಿ - ಸ್ತುವತೇ - ಮಾವತೇ - ವಸು । ನ - ಕಿಃ - ತತ್ - ಆ -

೩
ಮಿನಾತಿ - ತೇ ॥ ೪.೨೯೬ ॥

ಬಾರ್ಹದುಕ್ಥಮ್ ಬೃಹದುಕ್ಥೋ ಬೃಹತೀನ್ದ್ರಃ ॥

೨೯೬.೧. ನತ್ವಾಬೃಹ । ತೋಽಹಿದ್ರಯಾಃ ॥ ವರನ್ತಇನ್ದ್ರವೀಡಾಽ೨
ಹಿವಾಃ । ಯಾಚ್ಛಿಕ್ಷಾಸೀಽ೨ । ಸ್ತೂವತಾಇಮಾಽ೨ । ವತೇ
ವಸೂ ॥ ನಕಿಷ್ಟಾಽ೨ಹಿದಾ ॥ ಮಿನಾತಾಽ೨ಹಿಇತಾಽಹಿಳಹಿ
ಇ । ಓಽ೨ಹಿಳಹಿಇ ॥ ಡಾ ॥

ದೀ - ೪ । ಪ - ೧೦ । ಮಾ - ೭ । ನೇ । ೧೭ । ಹಿರ್ ॥

ಹೇ ಇನ್ದ್ರ! ಬೃಹನ್ತೋ ಬಲೇನ ಮಹಾನ್ತಃ ಅತಏವ **ವೀಡವಃ** । **ಯಚ್ಛಿಕ್ಷಸಿ ಸ್ತುವತೇ ಮಾವತೇ** ಸರ್ವತೋ ದೃಢಾ ಅಪಿ **ಅದ್ರಯಃ** ಪರ್ವತಾಃ **ತ್ವಾ** ತ್ವಾಂ **ನ ವರಂತೇ** ಬಲೇನ ನ ನಿವಾರಯನ್ತಿ । ಅನಿವಾರಣಮೇವೋತ್ತರಾರ್ಧೇನ ವಿವೃಣೋತಿ **ಸ್ತುವತೇ** ತ್ವದ್ವಿಷಯಂ ಸ್ತೋತ್ರಂ ಕುರ್ವತೇ **ಮಾವತೇ** ಮತ್ಸದೃಶಾಯ ಮಾದೃಶಾಯ ಸ್ತೋತ್ರೇ ಯದ್ **ವಸು** ಧನಂ **ಶಿಕ್ಷಸಿ** ದದಾಸಿ । ತೇ ತವ ತದೇತದ್ಧನಂ **ನ ಕಿಃ** ನ ಕಶ್ಚಿತ್ **ಆಮಿನಾತಿ** ಆಭಿಮುಖೇನ ಹಿನಸ್ತಿ । ಮೀಞ್ ಹಿಂಸಾಯಾಂ । ಮೀನಾತೇರ್ನಿಗಮೇ -೭.೩.,೮೧ - ಇತಿ ಹ್ರಸ್ವಃ । **ಮಾವತೇ** । ಯುಷ್ಮದಸ್ಮದೋಃ ಸಾದೃಶ್ಯೇಯತುಬ್ವಾಚ್ಯಃ - ೫.೧.೬೧ - ಇತಿ ವತುಪ್ । ಶಿಕ್ಷಸಿ ದಿತ್ಸಸಿ ಇತಿ ಚ ಪಾಠೌ ॥

ಇನ್ದ್ರ ಪರಮೈಶ್ವರ್ಯಶಾಲಿಯಾದ ಇನ್ದ್ರ ಭಗವಂತನೇ, ಬೃಹಂತಃ **ವೀಡವಃ** ಎತ್ತೆತ್ತರವಾದ ಭಾರೀ ಭಾರೀ, ವೀಡ್ವಜ್ಗದೃಢಾಙ್ಗ - ನಿರು.೨.೧೧ ॥ ಸ್ಥಿರವೂ ದೃಢವೂ ಬಲವೂ ಆದ, **ಅದ್ರಯಃ** - ಆದರಣೀಯ, ಒಡೆಯಲೂ ತೆಗ

ಯಲೂ ಸರಿಸಲೂ ಆಗದಂತಹ ಬೆಟ್ಟ ಪರ್ವತಗಳೂ, ತ್ವಾ ನಿನ್ನನ್ನು, ನ ವರಂತೆ ಸರಿಗಟ್ಟಲಾರವು, ಸ್ತುವತೇ ಮಾವತೇ ಸ್ತುತಿಸುವ ನನ್ನಂತಹವರಿಗೆ, ಯತ್ ವಸು ಶಿಕ್ಷಿ ಶಿಕ್ಷತಿ ದಾನಕರ್ಮ - ನಿ.ಘಂ.೩.೨೦ // ನೀನು ಕೊಡುವ ಧನಧಾನ್ಯವನ್ನಾಗಲೀ, ಆಧ್ಯಾತ್ಮ ಆನಂದವನ್ನಾಗಲೀ, ತೇ ತತ್ ನ ಕಿಃ ಆಮನಾತಿ ಯಾರೂ ಯಾವಕಾರಣಕ್ಕೂ ತಡೆಯಲಾರರು.

ಇನ್ದ್ರಭಗವಂತನೇ! ಸ್ಥಿರವೂ ದೃಢವೂ ದೇಶದ ಎಲ್ಲೆಕಟ್ಟಿನಂತಿರುವ ಮಹಾಮಹಾಪರ್ವತಗಳೂ ನಿನ್ನ ಶಕ್ತಿ ಸಾಹಸ ದೃಢತೆಗಳಿಗೆ ಸಮಾನಾಗಲಾರವು, ನನ್ನಂತಹ ಸ್ತುತಿಕರ್ತರಿಗೆ ನೀನು ನೀಡುವ ಧನಧಾನ್ಯ ಆನಂದಾದಿಗಳನ್ನು ಯಾರೂ ಯಾವ ಕಾರಣದಿಂದಲೂ ತಡೆಯಲಾರರು.

*ಹೇ! ಸುನಾಸೀರ! ಸುಸ್ಥಿರಮಪ್ಪ, ಕೋಂಟೆಯಂತೆ*
*ಬಲ್ಮೆಯಿಂದೆಸೆವ ಶೈಲಂಗಳುಂ ನಿನ್ನ ಬಲಕಾಂ ।*
*ಎಣೆಯಾಗವಲ್ತೆ; ಎನ್ನಂದದ ಸ್ತುತಿಪರರ್ಗಂ*
*ನೀನೀವ ಸಿರಿಯನಾರುಂ ತಡೆಯಲಮ್ಮರೆಂದುಂ ॥*

## ಋಕ್ - ೨೯೭

ಮೇಧಾತಿಥಿಃ ಕಾಣ್ವಃ । ಬೃಹತೀನ್ದ್ರಃ ॥

೧ ೨ ೩ ೨ು ೩ ೧ ೨ ೩ ೧ ೨೦
ಕ ಈಂ ವೇದ ಸುತೇ ಸಚಾ ಪಿಬನ್ತಂ ಕದ್ವಯೋ ದಧೇ ।

೩ ೧ ೨೦ ೩ ೧ ೨೦ ೩ ೨ ೩ ೧ ೨
ಅಯಂ ಯಃ ಪುರೋ ವಿಭಿನತ್ತ್ಯೋಜಸಾ ಮನ್ದಾನಃ ಶಿಪ್ರ್ಯನ್ಧಸಃ ॥

೨ ೩ ೨ ೧ ೨ರ ೧ ೨ರ ೧ ೨ರ ೩ ೩
ಕಃ - ಈಂ - ವೇದ - ಸುತೇ - ಸಚಾ । ಪಿಬನ್ತಂ - ಕತ್ - ವಯಃ - ದಧೇ ॥ ಅ

೨ ೧ ೨ರ ೩ ೧ ೨ ೩ ೧ ೨ ೧ ೨ರ ೩ ೨ ೩ ೨
ಯಂ - ಯಃ - ಪುರಃ - ವಿಭಿನತ್ತಿ - ವಿ - ಭಿನತ್ತಿ - ಓಜಸಾ । ಮನ್ದಾನಃ - ಶಿಪ್ರೀ

೧ ೨ರ
- ಅನ್ಧಸಃ ॥ *೫.೨೯೭* ॥

ನೈಪಾತಿಥಮ್ ವಾಶಮ್ ವಾ । ನಿಪಾತಿಥಿರ್ಬೃಹತೀನ್ದ್ರಃ ॥

೫ರ ರ ೨ ೧ ೨ — ೧
*೨೯೭.೧.* ಕಈಂವೇದಾ ॥ ಸುತಾಇಸಾಽ೧ಚಾಽ೨ । ಪಿಬನ್ತಂಕದ್ವಾ

೨ — ೧ ರ
ಯೋಽ೧ದಾಧಾಽ೨ಇ । ಅಯಂಯ ೭ಪುರೋವಿಭಿನ

೨ — ೧ರ ೨ ೧ ^
ತ್ತಾಓಽ೧ಜಾಸಾಽ೨ ॥ ಮನ್ದಾನಾಽ೨೩:ಶೀಽ೩ ॥ ಪ್ರಾಽ೨

೩ ೫ರ ರ ೩ ೫
ಯಾಽ೨೩ಳಔಹೋವಾ ॥ ಧಾಽ೨೩ಳಸಾಃ ॥

*ದೀ - ೬ । ಪ - ೭ । ಮಾ - ೬ । ಖೂ । ೧೮ । ೫೦೦ ॥*

**ಸುತೇ** ಅಭಿಷುತೇ ಸೋಮೇ **ಸಚಾ** ಋತ್ವಿಗ್ಭಿಃ ಸಹ ಸೋಮಂ **ಪಿಬನ್ತಮ್** ಏನಮಿನ್ದ್ರಂ **ಕೋವೇದ** ವೇತ್ತಿ ನ ಕೋಽಪಿ ವೇತ್ತೀತ್ಯರ್ಥಃ । **ಕತ್** ಕಿಂ ವಾ **ವಯಃ** ಅನ್ನಂ **ದಧೇ** ಧಾರಯತಿ । **ಯೋಽಯಮ್** ಇನ್ದ್ರಃ **ಶಿಪ್ರೀ** ಹನುಮಾನ್ **ಅನ್ಧಸಃ** ಸೋಮೇನ **ಮನ್ದಾನಃ** ಮನ್ದಮಾನಃ **ಓಜಸಾ** ಬಲೇನ **ಪುರೋ ವಿಭಿನ್ನತ್ತಿ** ॥

**ಸುತೇ** ಸೋಮಯಾಗದಲ್ಲಿ ವಿಧಿಪೂರ್ವಕವಾಗಿ ಸಿದ್ಧಪಡಿಸಿರುವ ಸೋಮರಸವನ್ನು, **ಸಚಾ** ದೇವತೆಗಳೊಡಗೂಡಿ ಋತ್ವಿಜರ ಜೊತೆಯಲ್ಲಿ, **ಪಿಬನ್ತಮ್** ಪಾನಮಾಡುವ, **ಈಮ್** ಈ ಇನ್ದ್ರಭಗವಂತನನ್ನು, **ಕೋವೇದ** ಯಾರು ತಾನೆ ಗುರುತಿಸಬಲ್ಲರು, ತಿಳಿಯಬಲ್ಲರು, **ಕತ್ ವಯಃ ದಧೇ** ತನ್ನ ಉದರದಲ್ಲಿ ಎಷ್ಟು ಅನ್ನವನ್ನು ಧರಿಸಿದ್ದಾನೆಂದಾಗಲೀ, ಎಷ್ಟು ಹವಿರ್ಲಕ್ಷಣ ವಾದ ಅನ್ನವನ್ನು ಅನುಗ್ರಹಿಸುತ್ತಾನೆಂದಾಗಲೀ, ಎಷ್ಟು ವಯಸ್ಸಿನವನೆಂದಾ ಗಲೀ, ಯಾರು ತಾನೇ ತಿಳಿದಾರು, **ಯಃ ಅಯಂ ಶಿಪ್ರೀ** ಶಿರಸ್ತ್ರಾಣ ಧರಿಸಿರುವ, ಬಹುವೇಗವಂತನಾದ, ಬಹುನುಣುಪಾದ ಕೆನ್ನೆಯುಳ್ಳ ಈ ಇನ್ದ್ರಭಗವಂತನು, **ಅನ್ಧಸಃ** ಸೋಮಪಾನದಿಂದ, **ಮನ್ದಾನಃ** ಹರ್ಷಗೊಂಡು, **ಓಜಸಾ** ತನ್ನ ಸ್ವಶಕ್ತಿಯಿಂದ, ಆತ್ಮಬಲದಿಂದ, ‾ಪುರಃ ಮನ ಏವ ಪುರಃ - *ಶ.೧೦.೩.೫.೭* ॥ 'ಮನಬುದ್ಧಿಚಿತ್ತ ಅಹಂಕಾರಗಳಲ್ಲಿ ವ್ಯಾಪ್ತವಾಗಿರುವ ತ್ರಿಗುಣಗಳನ್ನು ತ್ರಿಪುರ ವನ್ನು ಶತ್ರುಗಳ ನಗರಿಯನ್ನು ನೀರಿನಿಂದ ತುಂಬಿರುವ ಮೇಘಗಳೆಂಬ ದುರ್ಗ ಗಳನ್ನು, ವಿಭಿನತ್ತಿ ನಾಶಪಡಿಸುತ್ತಾನೆ.

ಯಜ್ಞದಲ್ಲಿ ದೇವತೆಗಳೊಂದಿಗೆ ಸೋಮಪಾನ ಮಾಡುವ ಇನ್ದ್ರನನ್ನು ಯಾರು ತಾನೇ ಗುರುತಿಸಿಯಾರು? ಅವನ ಉದರದಲ್ಲಿ ಎಷ್ಟು ಬಗೆಯ ಹವಿಸ್ಸು ಗಳಿವೆ ಎಂಬುದನ್ನಾಗಲೀ ಅವನು ಎಷ್ಟು ವಯೋಮಾನದವನೆಂದಾಗಲೀ ಯಾರೂ ತಿಳಿಯಲಾರರು. ಸೋಮಪಾನದಿಂದ ಹರ್ಷಿತನಾಗಿರುವ ಇನ್ದ್ರ ಭಗವಂತನು ಶಿರಸ್ತ್ರಾಣ ಧರಿಸಿ ಬಹುಶೀಘ್ರವಾಗಿ ತನ್ನ ಆತ್ಮಬಲದಿಂದ ಶತ್ರುಗಳ ದುರ್ಗಗಳನ್ನು ನಾಶಮಾಡುತ್ತಾನೆ ಭಕ್ತರ ಸಾಧಕರ ಮನೋಲಯ ಮಾಡುತ್ತಾನೆ.

*ಜನ್ನದೊಳ್ ಸುರರೊಡನೆ ಸೋಮಮಂ ಸವಿವಿಂದ್ರನಂ*
*ತಿಳಿವರಾರ್? ಅವನುದರದೊಳ್ ಸಲ್ಲುವಾಹುತಿಗಳಂ ।*

*ತಿಳಿವರಾರ್? ಅವನ ವಯಿಮಂ ತಿಳಿಯಲಾರ್ಗೆ ಶಕ್ಯಂ?*
*ಸೋಮಪಂ ಸಶಿರಸ್ತ್ರನರಿಪುರಂದರನಿಷ್ಟದಂ ॥*

## ಋಕ್ - ೨೯೮

ವಾಮದೇವೋ ಗೌತಮಃ । ಬೃಹತೀನ್ದ್ರಃ ॥

೧ ೨೩ ೧ ೨ ೩ ೨ ೩ ೨ ೩ ೧೨೩೧೨
ಯದಿನ್ದ್ರ ಶಾಸೋ ಅವ್ರತಂ ಚ್ಯಾವಯಾ ಸದಸಸ್ಪರಿ ।

೩ ೧ ೨೩ ೧ ೨ ೩ ೧ ೨ ೩ ೨ ೩ ೧ ೨
ಅಸ್ಮಾಕಮಂ಼ ಶುಂ ಮಘವನ್ಪುರುಸ್ಪೃಹಂ ವಸವ್ಯೇ ಅಧಿ ಬರ್ಹಯ ॥

೨ ೩ ೧ ೨ರ ೩ ೨ ೩ ೨ ೩ ೧ ೨ ೧ ೨ರ ೧
ಯತ್ - ಇನ್ದ್ರ - ಶಾಸಃ - ಅವ್ರತಂ - ಅ - ವ್ರತಂ । ಚ್ಯಾವಯ - ಸದಸಃ - ಪ

೨ರ ೩ ೧ ೨ ೩ ೨ ೩ ೧ ೨ ೩ ೧ ೨ರ
ರಿ ॥ ಅಸ್ಮಾಕಂ - ಅಂ಼ ಶುಂ - ಮಘವನ್ - ಪುರುಸ್ಪೃಹಂ - ಪುರು - ಸ್ಪೃಹ

೩ ೧ ೨ ೧ ೨ರ ೩
ಮ್ । ವಸವ್ಯೇ - ಅಧಿ - ಬರ್ಹಯ ॥ ೬.೨೯೮ ॥

ತೌರಶ್ರವಸಮ್ । ತುರಶ್ರವಾ ಬೃಹತೀನ್ದ್ರಃ ॥

೨ ೧ ೪೦ ೦ ೫ ೨ರ ೦
೨೯೮.೧. ಯದಿನ್ದ್ರಾ೨೨೩ಶಾಸೋಽಅವ್ರತಾಮ್ ॥ ಚ್ಯಾವಯಾಸ ।

೧ ೨ ೧ ೨
ದ೨೩ಸಾಸ್ಪಾರೌ । ವಾ೨೩೨ । ಅಸ್ಮಾಕಾಮೌ । ವಾ೨೩೨ ।

೧ ೨ ೧ ೨ ೧
ಶುಂಮಘವನ್ । ಪುರೂಸ್ಪೃಹಾ । ವಾ೨೩೨ ॥ ವಸಾವ್ಯಾ

೨　　　　　　೨೧　　　　೫　　೪
ಯಾ । ವಾ೨೩೨೩ । ಧಿಬೋ೨೨೩ಳವಾ ॥ ಹಾ೨೫ಯೋ

॥ ೫
೨೬ಹಾಇ ॥

ದೀ - ೪ । ಪ - ೧೩ । ಮಾ - ೪ । ದೀ । ೧೯ । ೫೧೧ ॥

ಹೇ **ಇನ್ದ್ರ! ಯದ್** ಯಸ್ಮಾತ್ ಕಾರಣಾತ್ **ಶಾಸಃ** ಶಿಕ್ಷಣೀಯಾನಾಂ ಯಜ್ಞ ವಿರೋಧೀನಾಂ ಶಿಕ್ಷಕಸ್ತ್ವಂ ತಸ್ಮಾತ್ ಕಾರಣಾತ್ **ಸದಸಃ** ಅಸ್ಮದ್ಯಾಗ ಗೃಹಸ್ಯ **ಪರಿ** ಪರಿತೋ ವರ್ತಮಾನಮ್ **ಅವ್ರತಮ್** ಅಕರ್ಮಾಣಂ ಯಾಗ ವಿರೋಧಿನಮಿತ್ಯರ್ಥಃ । **ಚ್ಯಾವಯ** ದೂರಂ ನಿಃಸಾರಯ । ಅಪಿ ಚ ಹೇ **ಮಘವನ್!** ಧನವನ್ನಿನ್ದ್ರ! **ಪುರುಸ್ಪೃಹಂ** ಬಹುಭಿಃ ಸ್ಪೃಹಣೀಯಮ್ **ಅಸ್ಮಾಕಮ್** ಅಸ್ಮದೀಯಮ್ **ಅಂಶುಮ್** ಸೋಮಂ **ವಸವ್ಯೇ** ವಸ್ತವ್ಯೇ ನಿವಾ ಸ ಯೋಗ್ಯೇ ಸ್ಥಾನೇ **ಅಧಿಬರ್ಹಮ** ಅಧಿಕಂ ವರ್ದ್ಧಯ ಯಜ್ಞ ಗೃಹೇ ಯಾಗ ವಿರೋಧಿನೋ ರಾಕ್ಷಸಾದೀನ್ನಿಸ್ಸಾರ್ಯ ಸೋಮಂ ಪ್ರವರ್ಧಯೇತ್ಯರ್ಥಃ ॥

ಇನ್ದ್ರಃ ಇನ್ದ್ರಭಗವಂತನೇ, **ಯತ್‌ಶಾಸಃ** ಶಾಸನದಂಡಧಾರಿಯಾದ ನೀನು ಯಜ್ಞವಿರೋಧಿಗಳನ್ನು ಶಿಕ್ಷಿಸಿ, ಸದಸಃ ಪರಿ ನಮ್ಮ ಯಜ್ಞಶಾಲೆಗಳನ್ನು ಸುತ್ತುವರೆದಿರುವ, **ಅವ್ರತಮ್** ಯಜ್ಞವಿರೋಧಿಗಳನ್ನು, **ಚ್ಯಾವಯ** ದೂರಕ್ಕೆ ಅಟ್ಟು, **ಮಘವನ್** ಧನಪತಿಯಾದ ಇನ್ದ್ರಭಗವಂತನೇ, **ಪುರುಸ್ಪೃಹಮ್** ನಿನಗೆ ಬಹಳ ಪ್ರೀತಿಪಾತ್ರರಾದ, **ಅಸ್ಮಾಕಂ ಅಂಶುಮ್ ವಸವ್ಯೇ** ನಮ್ಮ ಸೋಮವನ್ನಿಡುವ ಸ್ಥಳಗಳು ಸೋಮಯಜ್ಞಗೃಹಗಳು ವೃದ್ಧಿಯಾಗುವಂತೆ ಅನುಗ್ರಹಿಸು.

ಶಾಸನ ದಂಡಧರನಾದ ಇನ್ದ್ರಭಗವಂತನೇ ನಮ್ಮ ಯಜ್ಞಶಾಲೆಗಳನ್ನು ಸುತ್ತುವರೆದಿರುವ ಯಜ್ಞ ವಿರೋಧಿಗಳನ್ನು ನಿವಾರಿಸಿ ನಿನ್ನ ಪ್ರೀತಿಪಾತ್ರರಾದ ನಮ್ಮ ಯಜ್ಞಗೃಹಗಳು ಅಭಿವೃದ್ಧಿಯಾಗುವಂತೆ ಅನುಗ್ರಹಿಸು.

ದಂಡಧರ ಮಘವಂತ! ನಮ್ಮನಾವರಿಸಿ ನಿಂದ
ಯೆಜ್ಞರಿಪ್ರುಗಳನಳಿಸಿ, ನಿನ್ನೊಲ್ಮೆಯಾಂತು ನಿನ್ನಂ ।
ನೋಂತು ಜನ್ನದೆ ಬೇಳ್ವ ತಮ್ಮೆಲ್ಲರಂ ನಿರ್ನೆರಂ
ಕಾಪಿಡಯ್! ನಮ್ಮ ಸವನಾಲಯಂಗಳನೋವುದಯ್ ॥

## ಋಕ್ - ೨೯೯

ವಾಮದೇವೋ ಗೌತಮಃ । ಬೃಹತೀ । ತ್ವಷ್ಟಾ ಪರ್ಜನ್ಯಃ ಬ್ರಹ್ಮಣಸ್ಪತಿಃ ಅದಿತಿಃ ಇನ್ದ್ರಃ ॥

೧ ೨ ೩ ೨ ೩ ೧ ೨ ೩ ೨ ೩ ೧ ೨ ೩ ೧ ೨
ತ್ವಷ್ಟಾ ನೋ ದೈವ್ಯಂ ವಚಃ ಪರ್ಜನ್ಯೋ ಬ್ರಹ್ಮಣಸ್ಪತಿಃ ।
೩ ೧ ೨೦ ೩ ೧ ೨ ೩ ೧ ೨ ೩ ೨ ೩ ೧ ೨ ೩ ೧ ೨
ಪುತ್ರೈರ್ಭ್ರಾತೃಭಿರದಿತಿರ್ನು ಪಾತು ನೋ ದುಷ್ಟರಂ ತ್ರಾಮಣಂ ವಚಃ ॥

೧ ೨೦ ೩ ೧ ೨೦ ೧ ೨೦ ೩ ೧ ೨ ೧ ೨೦ ೧ ೨೦ ೩ ೨ ೩
ತ್ವಷ್ಟಾ - ನಃ - ದೈವ್ಯಂ - ವಚಃ । ಪರ್ಜನ್ಯಃ - ಬ್ರಹ್ಮಣಃ - ಪತಿಃ ॥ ಪುತ್ರೈಃ - ಪುತ್
೨ ೧ ೨೦ ೧ ೨೦ ೩ ೨ ೩ ೧ ೨
- ತ್ರೈಃ - ಭ್ರಾತೃಭಿಃ - ಅದಿತಿಃ - ಅ - ದಿತಿಃ - ನು - ಪಾತು - ನಃ । ದುಷ್ಟರಂ -
೩ ೧ ೨೦ ೧ ೨೦ ೧ ೨೦
ದುಃ - ತರಂ - ತ್ರಾಮಣಂ - ವಚಃ ॥ ೭.೨೯೯ ॥

ತ್ವಷ್ಟ್ರ್ಯಸ್ಸಾಮ । ತ್ವಾಷ್ಟ್ರೀ ಬೃಹತೀಸ್ತ್ರೋ ವಿಶ್ವೇದೇವಾಃ ॥

೩ ೨ ೦ ೦ ೫ ೪ ೫ ೨ ೧ ೦
೨೯೯.೧. ತ್ವಷ್ಟಾಽಇಳ । ನೋದೈವಿಯಮ್ । ವಚಾಃ ॥ ಪರ್ಜನ್ಯೋ

೨ ೧ ೨ ೧೦ ೦ ೨ ೧೦
ಬ್ರಹ್ಮಣಸ್ಪಾಽತಿಃ । ಪುತ್ರೈರ್ಭ್ರಾತೃಭಿರದಿತಿರ್ನುಪಾ

೨ ೧ ೨ ೧
ತೂಽನಃ ॥ ದುಷ್ಟರಾಽನ್ತ್ರ ॥ ಮಣಂವಾಽ

೨ ೧
ಚಾಽಃ । ಓಽ ॥ ಡಾ ॥

*ದೀ - ೬ । ಪ - ೯ । ಮಾ - ೯ । ಘೂ । ೨೦ । ೫೧೨ ॥*

ತ್ವಷ್ಟಾ ಏತತ್ಸಂಜ್ಞಕೋ ರೂಪಾಭಿಮಾನೀ ದೇವಃ **ನಃ** ಅಸ್ಮದೀಯಂ **ವಚಃ** ಪಾತು । **ಬ್ರಹ್ಮಣಸ್ಪತಿಃ** ಏತತ್ಸಂಜ್ಞಕೋ ಮಂತ್ರಾಭಿಮಾನೀ ದೇವಃ ಅಸ್ಮದೀಯಂ **ವಚಃ** ಪಾತು । ಕಿಂಚ! **ಅದಿತಿರ್ನು** ಅಖಂಡನೀಯಾ ಅದೀನಾ ವಾ ಏತನ್ನಾಮ್ನೀ ದೇವಮಾತಾ ಚ **ಪುತ್ರೈರ್ಭ್ರಾತೃಭಿಃ** ಸ್ವಕೀಯೈಃ ಸಹಿ ತಾ **ನಃ** ಅಸ್ಮಾಕಂ ಸಂಬಂಧಿ **ದುಸ್ತರಂ** ಕರ್ಮವಿರೋಧಿಭಿ ಸ್ತರೀತು ಮಶಕ್ಯಂ ತ್ರಾಮಣಂ ರಕ್ಷಣೀಯಂ **ವಚಃ** ಪಾತು ॥

ತ್ವಷ್ಟಾ ಋಷಿಃ ಇತಿ ವಿಂ । ತ್ವಷ್ಟಾ ತೂರ್ಣಮಶ್ನುತ ಇತಿ ನೈರು ಕ್ತಾಸ್ತ್ವಿಷೇರ್ವಾ ಸ್ಯಾದ್ದೀಪ್ತಿ ಕರ್ಮಣಸ್ತ್ವಕ್ಷತೇರ್ವಾ ಸ್ಯಾತ್ ಕರೋತಿ ಕರ್ಮಣಃ .... ಅಗ್ನಿರಿತಿ ಶಾಕಪೂಣಿಃ ಇತಿ ನಿ. ದೈ ೨.೧೩.೧೪ ॥ ರೂಪಾಭಿಮಾನ ದೇವತೆ ಯಾದ ತ್ವಷ್ಟ, ಅಗ್ನಿ, **ದೈವ್ಯಂ** ದೇವಾನಾಂ ಭವಂ, ವಚಃ - ವಾಕ್ಯಂ - ವೇದ, ಮನ್ತ್ರ ಪರ್ಜನ್ಯಃ ಇತಿ ವಿಂ - ಮೇಘದೇವತೆ, ಏತತ್ ತ್ರಯೇ ದೈವಮಿತ್ಯಪಿ ಕರ್ತೃಪದಮ್ ॥

**ನಃ** ಅಸ್ಮಾನ್ ಇತ್ಯೇವ ಕರ್ಮಪದಮ್ - ನಮ್ಮ, **ಬ್ರಹ್ಮಣಸ್ಪತಿಃ** ಬೃಹಸ್ಪತಿಃ ಇತಿ ವಿಂ । ಬ್ರಹ್ಮಣಃ ಅನ್ನಸ್ಯ ಪಾತಾ ವಾ ಪಾಲಯಿತಾ ವಾ .... ನಿ. ದೈ. ೪.೧೨-೧೩ ॥ ಏಷ ಚ ಪರ್ಜನ್ಯಃ ಮನ್ತ್ರ ಅಂಗಾತ್ - ಅಶ್ಮಾಸ್ಯಮವತಂ

ಬ್ರಹ್ಮಣಸ್ಪತಿರ್ಮಧುಧಾರಮ್ .... ಋ.ಸಂ. ೨.೨೪-೪, ನಿ.೧೦-೧೩, ಮನ್ತ್ರಾಭಿಮಾನ ದೇವತೆ ಸೂರ್ಯ, ಅದಿತಿರದೀನಾ ದೇವಮಾತಾ .... । ಇತ್ಯದಿ ತೇರ್ವಿಭೂತಿಮಾಚಷ್ಟ ಏತಾನ್ಯದೀನಾನೀತಿ ವಾ ॥ ಇತಿ - ನಿ.ನೈ.೪,೨೨-೨೩ ॥ ಅದಿತಿರ್ದ್ಯೌರದಿತಿ .... ಋ.ಸಂ. ೧.೮೯.೧೦, ನಿ.೪.೨೩, ದ್ಯುಲೋಕ ದೇವ ಮಾತೆ, ಪುತ್ರೈಃ ಭ್ರಾತೃಭಿಃ ಸಹೋದರರು ಮತ್ತು ಪುತ್ರರೊಂದಿಗೆ, ನಃ ನಮ್ಮ, ದುಷ್ಟರಂ - ವಿಘ್ನಕಾರಿಗಳಿಂದ, ತು ಶೀಘ್ರವಾಗಿ, ತ್ರಾಮಣಂ ವಚಃ ಪಾತು - ರಕ್ಷಕರೆಂಬ ವಚನವನ್ನು ಕಾಪಾಡಲಿ.

ತ್ವಷ್ಟ, ಅಗ್ನಿ ಪರ್ಜನ್ಯ ಬ್ರಹ್ಮಣಸ್ಪತಿ ಮಾತೆ ಅದಿತಿ ವೇದ ಮನ್ತ್ರಗಳು ನಮ್ಮನ್ನೂ ನಮ್ಮ ಸಹೋದರರನ್ನೂ ಮಕ್ಕಳನ್ನೂ ದುಷ್ಟರಿಂದ ರಕ್ಷಿಸಲಿ. ನಮ್ಮ ವಾಕ್ ಸಫಲವಾಗಲಿ.

*ತ್ವಷ್ಟೃ-ಪರ್ಜನ್ಯಾಗ್ನಿ-ಬ್ರಹ್ಮಣಸ್ಪತಿ-ಅದಿತಿಯರ್*
*ಒಡಗೂಡಿ ವೇದಮಂತ್ರಗಳೊಡನೆ ಸೇರುತೆಮ್ಮಂ ।*
*ಪೊರೆಯಲೆಂದುಂ; ಪೊರೆಗೆ ಸುತರಂ ಸಹೋದರರೊಡಂ*
*ದೂರಗೆಯ್ದರಿಗಳಂ; ನಮ್ಮ ನುಡಿ ಸಫಲಮಕ್ಕೆ ॥*

## ಋಕ್ - ೩೦೦

ಶ್ರುಷ್ಟಿಗುಃ ಕಾಣ್ವಃ । ಬೃಹತೀನ್ದ್ರಃ ॥

೩ ೨ ೩ ೨ ೩ ೧ ೨ ೩ ೧ ೨ ೩ ೧ ೨
ಕದಾ ಚನ ಸ್ತರೀರಸಿ ನೇನ್ದ್ರ ಸಶ್ಚಸಿ ದಾಶುಷೇ ।

೨ ೩ ೧ ೨೦ ೩ ೨ ೩ ೨ಉ ೩ ೧ ೨ ೩ ೧ ೨
ಉಪೋಪೇನ್ನು ಮಘವನ್ಭೂಯ ಇನ್ನು ತೇ ದಾನಂ ದೇವಸ್ಯ

ಪೃಚ್ಯತೇ ॥ ೮.೩೦೦ ॥

೩ ೨ ೩ ೨ ೩ ೨ ೩ ೨ ೩ ೧ ೨ ೧ ೨ರ
ಕದಾ - ಚ - ನ - ಸ್ತರೀಃ - ಅಸಿ । ನ - ಇನ್ದ್ರ - ಸಶ್ಚಸಿ - ದಾಶುಷೇ ॥ ಉಪೋಪ

೧ ೨ರ ೩ ೨ ೩ ೧ ೨ರ
- ಉಪ - ಉಪ - ಇತ್ - ನು - ಮಘವನ್ - ಭೂಯಃ - ಇತ್ - ನು -

೩ ೧ ೨ರ ೩ ೧ ೨ ೩
ತೇ । ದಾನಂ - ದೇವಸ್ಯ - ಪೃಚ್ಯತೇ ॥ *೮.೩೦೦* ॥

ಅದಿತೇಃ ಸಾಮ । ಅದಿತಿರ್ಬೃಹತೀನ್ದ್ರಃ ॥

೫ ೦ ೦ ೫೦ ೨ ^ ೩ ೫
*೩೦೦.೧.* ಕದಾಚನಾಸ್ತಾ೬ರೀರಸಾಇ ॥ ನೇನ್ದ್ರಾಸಾ೨೨೩೪ಶ್ಚಾ ।

೨ ^ ೩ ೫ ೩ ೪೦ ೩೦ ೪ ೫ ೩೦
ಸಾಇದಾಶೂ೨೨೩೪ಷಾಇ । ಉಪೋಪೇನ್ನುಮಘವನ್ಭೂ

೪ ೫ ೧ ^ ೩ ೫ ೨ ೩
ಯಇತ್ । ಹಾ೨೨ಇನೂ೨೨೩೪ತಾಇ ॥ ದಾನನ್ದಾ೨೨೩

೫ ೨ ೧ ೫ ೪ ॥ ೫
೪ಇವಾ ॥ ಸ್ಯಪೋ೨೨೩೪ವಾ ॥ ಚ್ಯಾ೨೫ತೋ೨೬ಹಾಇ ॥

*ದೀ - ೬ । ಪ - ೮ । ಮಾ - ೯ । ಗೋ । ೨೧ । ೫೧೩ ॥*

ಹೇ ಇನ್ದ್ರ! **ತ್ವಂ ಕದಾಚನ** ಕದಾಚಿದಪಿ **ಸ್ತರೀಃ** ಹಿಂಸಕೋ **ನಾಸಿ** ಯದ್ವಾ । ಸ್ತರೀರ್ನಿವೃತ್ತ ಪ್ರಸವಾ ಗೌಃ ತಥಾವಿಧೋ ನ ಭವಸಿ । ಸಾ ಯಥಾ ವತ್ಸಾಭಾವಾತ್ ಗೃಹಂ ಪ್ರತಿ ನಾಗಚ್ಛತಿ ನ ತಥಾ ಕರೋಷೀತ್ಯರ್ಥಃ ॥ ಕಿಂತು **ದಾಶುಷೇ** ಹವಿರ್ದಾತ್ರೇ ಯಜಮಾನಾಯ **ಸಶ್ಚಸಿ** ಸಂಗಚ್ಛಸೇ ಅಸ್ಮಾನ್ । ಹೇ **ಮಘವನ್!** ಧನವನ್ನಿನ್ದ್ರ! **ದೇವಸ್ಯ** ದ್ಯೋತನಾದಿ ಗುಣಕಸ್ಯ ತವ **ಭೂಯಃ** ಪ್ರಭೂತಂ ದಾನಮ್ **ಉಪೋಪೇತ್** ಪೃಚ್ಯತೇ ಅಪರ ಉಪಶಬ್ದಃ ಪೂರಣಃ ಉಪಪೃಚ್ಯತ ಏವ ಅಸ್ಮಾಭಿಃ ಸಂಪೃಚ್ಯತ ಇತ್ಯರ್ಥಃ ॥

ಇನ್ದ್ರಃ ಪರಮೈಶ್ವರ್ಯಶಾಲಿಯಾದ ಇನ್ದ್ರ ಭಗವಂತನೇ, ಕದಾಚನ ಎಂದೂ ಯಾವ ಪರಿಸ್ಥಿತಿಯಲ್ಲೂ, ದಾಶುಷೇ ಹವಿಸ್ಸನ್ನರ್ಪಿಸುವ ಯಜಮಾನನ, ಸ್ತರೀಃ ನ ಅಪಿ - ಸ್ತೃಣಾತಿ ವಧಕರ್ಮಾ - ನಿ.ಘಂ.೨.೧೯ ॥ ಹಿಂಸಕನಾಗಿಲ್ಲ, ನಸ್ತರೀಪಯಃ ದದೌ । ಅತಃ ಸ್ತರೀರಿತಿ ಅಭಾಗಾ ಉಚ್ಯತೇ । ಯಾದೃಶೀ ಸ್ತರೀರಭಾಗಾ ತಾದೃಶಂ ತ್ವಾಂ ಹೇ ಇನ್ದ್ರ ಕದಾಚಿದಪಿ ನ ಅಭಿಭವತೀತ್ಯರ್ಥಃ । ವಿ ॥ ಸಂತಾನೋತ್ಪತ್ತಿ ಮಾಡದ ಹಾಲು ಕೊಡದ ಬಂಜೆ ಹಸುವಿನಂತಲ್ಲ. ಸಶ್ಚಸಿ ಮಿತ್ರನಾಗಿರುವೆ. ಕರ್ಮಫಲವನ್ನು ತಲುಪಿಸುವೆ, ಮಘವನ್ ಐಶ್ವರ್ಯವಂತನೇ, ದೇವಸ್ಯ ದಾನಾದಿ ಗುಣಯುಕ್ತನಾದ, ತೇ ನಿನ್ನ, ದಾನಮ್ ಕರ್ಮಫಲಾನುಗುಣ ದಾನವು, ಭೂಯಃ ಬಹಳವಾದ, ಪುನರ್ಜನ್ಮದಲ್ಲಿಯೂ, ಉಪೋಪೇತ್ ಪೃಚ್ಯತೇ ಯಾವತ್ಪೂರ್ವದಾನಂ ನೈವ ಕ್ಷೀಯತೇ ತಾವದೇವ ದದಾಸೀತ್ಯರ್ಥಃ । ಹಿಂದೆ ಕೊಟ್ಟ ದಾನ ಕಡಿಮೆಯಾಗುವುದುರೊಳಗೆ ಮತ್ತಷ್ಟು ಅನುಗ್ರಹಿಸುವೆ. ಮುಂದುವರೆಸುವೆ.

ಪರಮೈಶ್ವರ್ಯಶಾಲಿಯಾದ ಇನ್ದ್ರಭಗವಂತನೇ! ಹವಿಸ್ಸನ್ನರ್ಪಿಸುವ ಯಜಮಾನ ಸದಾ ಮಿತ್ರನಾಗಿದ್ದುಕೊಂಡು ಎಂದೂ ಯಾವಾಗಲೂ ಹಿಂಸಿಸುವುದಿಲ್ಲ ಹಾಗೂ ನೀನು ಬಂಜೆ ಹಸುವಿನಂತೆ ನಿಷ್ಪ್ರಯೋಜಕನಲ್ಲ. ನೀನು ಅನುಗ್ರಹಿಸುವ ವಿಪುಲನಾದ ಕರ್ಮಫಲವು ಕಡಿಮೆಯಾಗುತ್ತಿದ್ದಂತೆ ಪುನಃ ಪುನಃ ನೀನು ಅನುಗ್ರಹಿಸುವುದರಿಂದ ಮುಂದಿನ ಜನ್ಮದಲ್ಲೂ ಅನುಭವಿಸುವುದಕ್ಕೆ ಸಾಕಷ್ಟು ಸಿದ್ಧವಾಗಿರುತ್ತದೆ.

ದೇವ! ಯಜಮಾನನಿವನೊಲ್ಮೆಕೆಳೆಯನಹಿಂಸಕಂ
ನೀಂ ಗೊಡ್ಡುದನದವೋಲಲ್ಲದೆ ಸದಾನುಗ್ರಹಂ ।
ನೀನೀವ ದಾನಮೆಂದುಂ ಸೊರಗದಳಿಯದಲ್ತೆ
ಕರ್ಮಾನುಗುಣಮೆಂದಿಗಂ ಸಲ್ವುದಲ್ತೆ ಸೊಗದಿಂ ॥

# ಋಕ್ - ೩೦೧

ಮೇಧ್ಯಾತಿಥಿಃ ಕಾಣ್ವಃ । ಬೃಹತೀನ್ದ್ರಃ ॥

೩ ೧ ೨ರ ೩ ೧ ೨ ೩ ೧ ೨
ಯುಙ್ಕ್ಷ್ವಾ ಹಿ ವೃತ್ರಹನ್ತಮ ಹರೀ ಇನ್ದ್ರ ಪರಾವತಃ ।

೩ ೧ ೨ ೩ ೧ ೨ ೩ ೨ ೩ ೨ ೩ ೧
ಅರ್ವಾಚೀನೋ ಮಘವನ್ತ್ಸೋಮಪೀತಯ ಉಗ್ರ ಋಷ್ವೇಭಿರಾ

೨
ಗಹಿ ॥ ೯.೩೦೧ ॥

೩ ೨ ೩ ೩೦೧೨ ೩
ಯುಙ್ಕ್ಷ್ವ - ಹಿ - ವೃತ್ರಹನ್ತಮ - ವೃತ್ರ - ಹನ್ತಮ । ಹರೀಇತಿ - ಇನ್ದ್ರ - ಪ

೧೨ ೨ ೩ ೨ ೩ ೧ ೨ರ
ರಾವತಃ ॥ ಅರ್ವಾಚೀನಃ - ಅರ್ವ - ಅಚೀನಃ - ಮಘವನ್ - ಸೋಮಪೀತ

೧ ೨ರ ೩ ೨ ೩ ೧ ೨ ೩
ಯೇ - ಸೋಮ - ಪೀತಯೇ । ಉಗ್ರಃ - ಋಷ್ವೇಭಿಃ - ಆ - ಗಹಿ ॥

ಆಜೀಗರ್ತಮ್ । ಆಜೀಗರ್ತಿರ್ಬೃಹತೀನ್ದ್ರಃ ॥

೧ __ ೧ ೨ ೧ ೨ ೦ ೪
೩೦೧.೧. ಆಇಹೀಽ೨ । ಆಇಹಿಹಾಇ । ಯುಂಕ್ಷ್ವಾಹಿವಾಽ೩ರ್ತ್ರಾ೩

೨೩ ೫ ೧ ೦ ೨ ೧ ೨ ೩
ಹನ್ತಮ ॥ ಹಾರೀಇನ್ದ್ರ । ಪರಾವಾಽ೧ತಾಽ೨೩೪ಃ । ಅ

೨ ೩೦ ೨ ೧ ೨ ೧೦ ೨
ರ್ವಾಽ೩೪ಚೀನಾಃ । ಮಾಘವನ್ತ್ಸೋ । ಮಪಾಇತಾಽ೧

೩ ೨ ೩ ೨ ೨ ೧
ಯಾಽ೨೩೪ಇ ॥ ಉಗ್ರಾಽ೩೪ಋಷ್ವಾಽ೩ಇ ॥ ಭಿರೋಽ

೫ ೪ ॥ ೫
೨೩೪ವಾ ॥ ಗಾಽ೫ಹೋಽ೬ಹಾಇ ॥

*ದೀ - ೪ / ಪ - ೧೧ / ಮಾ - ೧೧ / ತ./೨೨/೫೧೪ ॥*

ಹೇ **ವೃತ್ರಹನ್ತಮ!** ವೃತ್ರಂ ಹತವಾನ್ ವೃತ್ರಹಾ ಅತಿಶಯೇನ ವೃತ್ರಂ ಹತವಾನ್ ವೃತ್ರಹನ್ತಮಃ ಯಥಾ ಪುನರ್ನೋತ್ತಿಷ್ಠತಿ ತಥಾ ಹತವಾನಿತ್ಯರ್ಥಃ। ಅನೋಽನುಟ್ - ಪಾ.೮.೨.೧೬ - ಇತಿ ತಮಪ್ಯೋಽನುಟ್ । ಹೇ ತಾದೃಶೇನ್ದ್ರ! **ಹರೀ** - ತ್ವದೀಯಾವಶ್ವೌ **ಯುಙ್ಕ್ಷ್ವ ಹಿ** ರವಧಾರಣೇ ಆತ್ಮೀಯೇ ರಥೇ ಯೋಜಯೈವ । ಹೇ **ಮಘವನ್!** ಧನವನ್! **ಉಗ್ರಃ** ಉದ್ಗೂರ್ಣಬಲಸ್ತ್ವಂ **ಸೋಮಪೀತಯೇ** ಸೋಮಸ್ಯ ಪಾನಾರ್ಥೇ ದಾಸೀಭಾರಾದಿತ್ವಾತ್ಪೂರ್ವಪದ ಪ್ರಕೃತಿ ಸ್ವರತ್ವಮ್ **ಅರ್ವಾಚೀನೋ**ಽಸ್ಮದಭಿಮುಖಃ **ಋಷ್ವೇಭಿಃ** ಋಷ್ವೈರ್ದರ್ಶನೀಯೈರ್ಮರುದ್ಭಿಃ ಸಾರ್ಧಂ **ಪರಾವತಃ** ದೂರನಾಮೈತತ್ ದೂರೇ ವರ್ತಮಾನಾತ್ ದ್ಯುಲೋಕಾತ್ **ಆಗಹಿ** ಆಗಚ್ಛ ॥

**ವೃತ್ರಹನ್ತಮ** ಪಾಪನಾಶಕನೇ ಶತ್ರುಹಂತಕನೇ ಮೇಘವಿದಾರಕನೇ, **ಯುಙ್ಕ್ಷ್ವಾಹಿ** ಹರಿ ಹರಿ ಎಂಬ ಕುದುರೆಗಳನ್ನು ನಿನ್ನ ರಥಕ್ಕೆ ಹೂಡು, ದುಃಖಾಪಹರಣ ಸುಖಾಹರಣವೆಂಬ ಅಥವಾ ದಯೆ ಮತ್ತು ಪ್ರಸಾದಧರ್ಮವೆಂಬ ಕುದುರೆಗಳನ್ನು ಹೂಡು, **ಪರಾವತಃ** ದೂರದ ದ್ಯುಲೋಕದಿಂದ, ತ್ವಮಸ್ಯ ಸಾರೇ ರಜಸೋ ವ್ಯೋಮನಃ - *ಋ.೧.೫೨.೧೨.* ॥ **ಅನ್ತೋ ವೈ ಪರಾವತಃ** *ಐ.೫.೨* ॥ ಮೋಕ್ಷಧಾಮದಿಂದ, **ಅರ್ವಾಚೀನಃ** ಅರ್ವಾಕ್ ಇಲ್ಲಿ ಹೃದಯಸ್ಥ ಅಭಿಮುಖವಾಗಿ, **ಋಷ್ವೇಭಿಃ** ಋಷ್ವಃ ಮಹನ್ನಾಮ - *ನಿ.ಘಂ.೩.೩.* ॥ ಆಕರ್ಷಕ ರೂಪಾದಿ ಮಹಾಗುಣಗಳಿಂದಾಗಿ ದರ್ಶನೀಯನಾದವನೇ, **ಉಗ್ರಃ** ಅತಿ

ಭಯಂಕರ ಬಲಶಾಲಿಯೇ, ಮಘವನ್ ಧನವಂತನೇ, ಸೋಮ ಪೀತಯೇ ಸೋಮಪಾನಕ್ಕಾಗಿ, ಆಗಹಿ ದಯಮಾಡು.

ಶತ್ರುಹಂತಕನೂ ಮೇಘವಿದಾರಕನೂ ಪಾಪನಾಶಕನೂ ಅತಿ ಭಯಂಕರ ಬಲವುಳ್ಳವನೂ ಧನವಂತನೂ ದರ್ಶನೀಯನೂ ಆದ ಇನ್ದ್ರ ಭಗವಂತನೇ! ಅತಿದೂರದ ದ್ಯುಲೋಕದಿಂದ ಮೋಕ್ಷಧಾಮದಿಂದ ದುಃಖಾಪಹರಣ ಸುಖಾಹರಣವೆಂಬ ದಯೆ ಮತ್ತು ಪ್ರಸಾದಧರ್ಮವೆಂಬ ನಿನ್ನ ಹರಿ ಎಂಬೆರಡು ಕುದುರೆಗಳನ್ನು ನಿನ್ನ ರಥಕ್ಕೆ ಮನಸ್ಸಿನ ರಥಕ್ಕೆ ಹೂಡಿ ಆನಂದ ರಸವನ್ನು , ಸೋಮ ಪಾನವನ್ನು ಮಾಡಲು ನನ್ನ ಹೃದಯ ಸ್ಥಳಕ್ಕೆ ನನಗಭಿಮುಖವಾಗಿ ದಯಮಾಡು.

ವೃತ್ರಹರ! ದರ್ಶನೀಯೇಂದ್ರನೆ! ದ್ಯುಲೋಕದಿಂದ ॥
ದುಃಖಹರಮುಂ ಸುಖಪ್ರದಮುಮಪ್ಪ ತ್ವದೀಯಂ ।
ಕರುಣೆ-ಪ್ರಸಾದಾಶ್ವಯುಗಲಂ ಮನೋರಥಹಿತಂ
ಸಲ್ಲಾಗಮಿಸೆನ್ನುರಕೆ ಸೋಮಪಾನಕೆಂದು ॥

## ಋಕ್ - ೩೦೨

ನೃಮೇಧಃ ಆಂಗಿರಸಃ । ಬೃಹತೀನ್ದ್ರಃ ॥

೨ ೩ ೧ ೨೦ ೩ ೧ ೨
ತ್ವಾಮಿದಾಹ್ಯೋ ನರೋಽಪೀಪ್ಯನ್ವಜ್ರಿನ್ ಭೂರ್ಣಯಃ ।

೧ ೨೩ ೧ ೨ ೩ ೨ ೩ ೨ ೩ ೧ ೨ ೩ ೧ ೨
ಸ ಇನ್ದ್ರ ಸ್ತೋಮವಾಹಸ ಇಹ ಶ್ರುಧ್ಯುಪ ಸ್ವಸರಮಾ ಗಹಿ ॥

ಸ್ವ - ೧೩ । ಉ - ೨ । ಧಾ - ೮೨ । ಠಿ ॥ ದ - ೧ ॥

ಇತಿ ಪ್ರಥಮಾ ದಶತಿಃ ॥ ೧ ॥ ಇತಿ ಸಪ್ತಮಃ ಖಣ್ಡಃ ॥ ೭ ॥

೨ ೩ ೨ ೧ ೨ರ ೧ ೨ರ ೩ ೧ ೨ರ
ತ್ವಾಂ - ಇದಾ - ಹ್ಯಃ - ನರಃ । ಅಪೀಪ್ಯನ್ - ವಜ್ರಿನ್ - ಭೂರ್ಣಯಃ ॥ ಸಃ -

೩ ೧ ೨ರ ೧ ೨ರ ೩ ೩ ೨ ೩ ೧ ೨ರ ೧
ಇನ್ದ್ರ - ಸ್ತೋಮವಾಹಸಃ - ಸ್ತೋಮ - ವಾಹಸಃ - ಇಹ - ಶ್ರುಧಿ । ಉಪ - ಸ್ವ

೨ರ ೩
ಸರಂ - ಆ - ಗಹಿ ॥ ೧೦.೩೦೨ ॥

ಆ - ೫೯ । ಆ - ೨೧ । ಪ - ೧೯೯ । ತೋ । ದ - ೧ ॥

-

ಮಾಧುಚ್ಛನ್ದಸಮ್ । ಮಧುಚ್ಛನ್ದಾ ಬೃಹತೀನ್ದ್ರಃ ॥

೩೦೪ ೫೦ ೨ ^ ೩ ೪೦ ೫ ೫ ೨ ೧ ೨
೩೦೨.೧. ತ್ವಾಮಿದಾ । ಹೋ೬ಇ । ಹಿಯೋ೬ನರಾ೭೬ಏ ॥ ಅಪಾಇಪ್ಯ

೧ ೨^ ೩ ೫ ೧ ೨ ೧ರ
ನ್ವಾ । ಜ್ರಾಇನ್ಭೂರ್ಣಾ೭೨೩೪ಯಾಃ । ಸಇನ್ದ್ರಸ್ತೋ೬ಮ

೨ರ ೧ ೨^ ೩೦ ೨ ೩೦ ೨
ವಾಹಸಃ । ಇಹಾಶ್ರೂಧಾ । ಔಹೋ೬೭೩೪ವಾಹಾಇ ॥ ಉ

೧ ೨^ ೩೦ ೨ ೩೦ ೨ ೧ರ ೨
ಪಾಸ್ವಾಸಾ । ಔಹೋ೬೭೩೪ವಾಹಾ ॥ ರಮಾಗಾ೭೨೩ಹಾ

೧
೭೩೪೩ಇ । ಓ೭೨೩೪೫ಇ ॥ ಡಾ ॥

ದೀ - ೧೦ । ಪ - ೧೩ । ಮಾ - ೧೦ । ಬೌ । ೨೨. । ೫೧೫ ॥

ದಶಸಪ್ತಮಃ ಖಣ್ಡಃ ॥ ೭ । ದಶತಿಃ ॥ ೧ ॥

ಹೇ **ವಜ್ರಿನ್!** ಇನ್ದ್ರ ತ್ವಾ **ಭೂರ್ಣಯಃ** ಹವಿರ್ಭರಣ ಶೀಲಾ **ನರಃ** ಕರ್ಮಣಾಂ ನೇತಾರೋ ಯಜಮಾನಾಃ **ಇದಾ** ಅದ್ಯಹ್ಯಃ ಪೂರ್ವೇದ್ಯುಶ್ಚ **ಅಪೀಪ್ಯನ್** ಸೋಮಮಪಾಯಯನ್ । ಹೇ **ಇನ್ದ್ರ! ಸ ತ್ವಂ ಸ್ತೋಮವಾಹಸಃ** ಷಷ್ಠ್ಯರ್ಥೇ ಪ್ರಥಮಾ ಸ್ತೋಮವಾಹಸಾಂ ಸ್ತೋತ್ರವಾಹಕಾನಾಮ ಸ್ಮಾಕಂ ಸ್ತೋತ್ರಂ **ಇಹ** ಯಜ್ಞೇ **ಶ್ರುಧಿ** ಶ್ರುಣು **ಸ್ವಸರಂ** ಗೃಹಂ ಚ । ದುರ್ಯಾಃ ಸ್ವಸರಾಣೀತಿ - ನೈಘ.೪.೧೦ - ಗೃಹನಾಮಸು ಪಾಠಾತ್ ಉಪಾಹ್ಯ ಉಪಾಗಚ್ಛ ॥

**ವಜ್ರಿನ್** ವಜ್ರಾಯುಧನೇ, ದುಷ್ಟದಮನನೇ, **ತ್ವಮ್** ನಿನಗೆ, **ಭೂರ್ಣಯಃ** ಯಜ್ಞವೇದಿಯಲ್ಲಿ ಕರ್ಮಗಳನ್ನು ನೆರವೇರಿಸಲು ಓಡಾಡುತ್ತಿರುವ ಯಜ್ಞಕರ್ಮನಿರತರು, **ನರಃ** - ಋತ್ವಿಜರು, ಯಜಮಾನರು, **ಇದಾಹ್ನಃ** ಇಂದು ಮತ್ತು ನಿನ್ನೆಯ ದಿನ, ಯಾವಾಗಲೂ ಸರ್ವಕಾಲದಲ್ಲೂ, **ಅಪೀಪ್ಯನ್** ಪ್ರಸನ್ನಗೊಳಿಸಲ್ಪಟ್ಟಿರುವ ಸೋಮಪಾನ ಮಾಡಿಸಲ್ಪಟ್ಟಿರುವ, **ಇನ್ದ್ರ** ಇನ್ದ್ರನೇ, **ಸಃ** ಆ ನೀನು, **ಸ್ತೋಮವಾಹಸಃ** ಸ್ತೋಮಾ ಯಂ ವಹನ್ತಿ ತ್ವಾಂ ಪ್ರತಿಪಾದ ಯನ್ತಿ ಉಚ್ಚಾರಯನ್ತಿ ತೇ ಸ್ತೋಮವಾಹಸಃ ಸ್ತೋತಾರ ಇತ್ಯರ್ಥಃ । ವಿ ॥ ವೇದದ ಸ್ತೋತ್ರ ಮನ್ತ್ರಗಳ ಗಾನಗಳನ್ನು, **ಇಹ** ಈ ಯಜ್ಞದಲ್ಲಿ, **ಶ್ರುಧಿ** ಶ್ರವಣ ಮಾಡಲು, **ಉಪ ಸ್ವಸರಮ್** ಸ್ವಸರಾಣಿ ಗೃಹಾಣಿ - ನಿ.ಘಂ.೩.೪ ॥ ನಮ್ಮ ಹೃದಯ ಮಂದಿರಕ್ಕೆ ಯಜ್ಞಮಂಟಪಕ್ಕೆ ನಮ್ಮ ಮನೆಗೆ, **ಆಗಹಿ** ದಯಮಾಡು.

ವಜ್ರದಂಡಧರನಾದ ಇನ್ದ್ರ ಭಗವಂತನೇ ಇಂದು ಮತ್ತು ನಿನ್ನೆ ಈ ಯಜ್ಞವೇದಿಯಲ್ಲಿ ಕರ್ಮ ನೆರವೇರಿಸುತ್ತಿರುವ ಋತ್ವಿಜರು ಸೋಮಪಾನದಿಂದ ನಿನ್ನನ್ನು ಪ್ರಸನ್ನಗೊಳಿಸಿದ್ದಾರಷ್ಟೆ. ಅಂತಹ ನೀನು ನಾವು ಕೇಳಿಸುವ ಸ್ತೋತ್ರಗಳ ಸಾಮಗಾನವನ್ನು ಶ್ರವಣ ಮಾಡಲು ನಮ್ಮ ಯಜ್ಞಮಂಟಪಕ್ಕೆ ನಮ್ಮ ಮನೆಗಳಿಗೆ ನಮ್ಮ ಹೃದಯ ಮಂದಿರಕ್ಕೆ ಬಿಜಯಮಾಡು ದಯಮಾಡು.

ವಜ್ರಿ! ನಿನ್ನನ್ನಿಂದು, ನಿನ್ನ ಈ ಮಖವೇದಿಯೊಳ್
ಋತ್ವಿಜರ್ ಸೋಮಾಹುತಿಯನಿತ್ತು ಪ್ರಾಜಿಸಿರ್ಪರ್ ।
ಅಂತಪ್ಪ ನೀನೆಮ್ಮ ಸಾಮಂಗಳಂ ಕೇಳಲೆಂ-
ದೆಮ್ಮ ಹೃನ್ಮಂದಿರಕ್ಕಾಗಮಿಪ್ರುದಳ್ತಿಯಿಂದಂ ॥

## ಋಕ್ - ೩೦೩

ವಸಿಷ್ಠೋ ಮೈತ್ರಾವರುಣಿಃ । ಬೃಹತೀ ಉಷಾ ॥

೧ ೨ ೩ ೨ಕ ೧ ೨ ೩ ೨ ೩ ೨
ಪ್ರತ್ಯು ಅದರ್ಶ್ಯಾಯತ್ಯುಽಚ್ಛನ್ತೀ ದುಹಿತಾ ದಿವಃ ।

೧ ೨ ೩ ೧ ೨ ೩ ೧ ೨ ೩ ೨ ೩ ೧ ೨
ಅಪೋ ಮಹೀ ವೃಣುತೇ ಚಕ್ಷುಷಾ ತಮೋ ಜ್ಯೋತಿಷ್ಕೃಣೋತಿ

೩ ೧ ೨
ಸೂನರೀ ॥ ೧.೩೦೩ ॥

೧ ೨೦ ೩ ೨ ೩ ೨ ೩ ೧ ೨ ೩ ೨ ೩
ಪ್ರತಿ - ಉ - ಅದರ್ಶಿ - ಆಯತೀ - ಆ - ಯತೀ । ಉಚ್ಛನ್ತೀ - ದುಹಿತಾ - ದಿ

೨ ೧ ೨೦ ೩ ೨ ೩ ೧ ೨೦ ೧ ೨೦ ೧ ೨೦ ೩
ವಃ ॥ ಅಪ - ಉ - ಮಹೀ - ವೃಣುತೇ - ಚಕ್ಷುಷಾ - ತಮಃ । ಜ್ಯೋತಿಃ - ಕೃ

೧ ೨ ೩ ೧ ೨೦
ಣೋತಿ - ಸೂನರೀ - ಸು - ನರೀ ॥ ೧.೩೦೩ ॥

ಉಷಸಸ್ಸಾಮ । ಉಷಾ ಬೃಹತೀನ್ದ್ರಃ ಉಷಾ ॥

೨ ೧ ೩ ೨ ೧ ೩ ೨ ೧
೩೦೩.೧. ಪ್ರತಾಇ । ಇಹಾ । ಆಇ । ಇಹಾ । ಉವದ । ಶಿಽ೩ಆಯ

೨ ೧ ೨ ೧ ೩ ೨ ೧ ೩ ೨ ೦
ತೀ । ಆಯತೀ ॥ ಉಚ್ಛಾ । ಇಹಾ । ಆ । ಇಹಾ । ತೀದು ।

೧ರ — ೧ರ — ೧ ೩ ೨ ೧
ಹಿಽ೩ತಾದಿವಾಽ೨: । ಆದಿವಾಽ೨: ॥ ಅಪ್ರೋ । ಇಹಾ । ಓ ।

೩ ೨ ೧ ೦ ೦ ೧ರ — ೧ರ
ಇಹಾ । ಮಾಹೀವೃಣುತೇಚ । ಕ್ಷುಷಾತಮಾಽ೨: । ಆತ

— ೦ ೧ ೩ ೨ ೧ ೩ ೨
ಮಾಽ೨: ॥ ಜ್ಯೋತಾಇ । ಇಹಾ । ಆಇ । ಇಹಾ । ಕೃ

೦ ೧ರ — ೧ರ ೧
ಣೋ । ತಿಽ೩ಸೂನರೀಽ೨ । ಓನರೀಽ೨೩೪೩ । ಓಽ೨೩೪

೫ಇ ॥ ಡಾ ॥

*ದೀ - ೫ । ಪ - ೩೦ । ಮಾ - ೧೦ । ಮೌ । ೨೪ । ೫೧೬ ॥*

**ಆಯತೀ** ಆಗಚ್ಛನ್ತೀ **ವ್ಯುಚ್ಛನ್ತೀ** ತಮಾಂಸಿ ವಿವಾಸಯನ್ತೀ ವರ್ಜಯನ್ತೀ **ದಿವೋ** ದ್ಯುಲೋಕಸ್ಯ ಸೂರ್ಯಸ್ಯ ವಾ **ದುಹಿತಾ** ಪುತ್ರೀ ಏವಂಭೂತಾ ಉಷಾಃ **ಪ್ರತ್ಯದರ್ಶಿ** ಸರ್ವೈಃ ಪ್ರತಿದೃಶ್ಯತೇ ಉ ಇತಿ ಪೂರಣಃ ಸೈಷಾ **ಮಹೀ** ಮಹತೀ । ಯದ್ವಾ ಮಹೀ ಮಹತ್ತಮೋ ನೈಶಂ ತಮೋಽಂಧಕಾರಂ **ಅಪ** ಉ ಇತಿ ನಿಪಾತದ್ವಯ ಸಮುದಾಯಃ ಅಪೇತ್ಯಸ್ಯಾರ್ಥೇ **ಅಪೋವೃಣುತೇ** ಅಪವೃಣೋತಿ । ಕಥಂ? **ಚಕ್ಷುಷಾ** ದರ್ಶನೇನ । ಏವಂ ಕೃತ್ವಾ **ಸೂನರೀ** ಜನಾನಾಂ ಸುಷ್ಠು ನೇತ್ರೀ ಉಷಾಃ **ಜ್ಯೋತಿಃ** ಪ್ರಕಾಶಂ **ಕೃಣೋತಿ** ಕರೋತಿ ।

ಅಪ್ರೋ ಮಹೀ ವೃಣುತೇ ಚಕ್ಷುಷಾ ಇತಿ ಛಂದೋಗಾಃ । ಅಪ್ರೋ ಮಹಿ ವ್ಯಯ ತಿ ಚಕ್ಷುಷೇ ಇತಿ ಬಹ್ವೃಚಾಃ ॥

**ದಿವಃ** ದ್ಯುಲೋಕೇ ಜಾಯಮಾನತ್ವಾತ್ ದಿವಃ, **ದುಹಿತಾ** ಅತ ಏವ ಪ್ರಜಾಪತ್ಯಪರ ಪರ್ಯಾಯಸ್ಯಾದಿತ್ಯಶ್ಚ ಪ್ರತಿದಿನಮುಷಸಃ ಪಶ್ಚಾತ್ ಧಾವಮಾನ ತ್ವಾತ್ ಕನ್ಯಾಬಲಾತ್ಕಾರಾಪವಾದಃ ಇತಿ ವಿ ॥ ದ್ಯುಲೋಕದ ಸೂರ್ಯನ, **ದುಹಿತಾ** ಪುತ್ರಿಯಾದ, **ಉಷಾ** ಶ್ರದ್ಧಾ ವೈ ಸೂರ್ಯಸ್ಯ ದುಹಿತಾ - ಶ.೧೨.೭.೩.೧೧ ॥ ಪ್ರಜ್ಞಾಪೂರ್ವರೂಪಂ ಶ್ರದ್ಧೋತ್ತರ ರೂಪಮ್ - ಶಾಂ.ಆ.೩.೭, ಕೌ.ಉ.೧.೭ ॥ ಜ್ಞಾನಪ್ರಕಾಶಕನಾದ ಭಗವಂತನಿಂದ ಜ್ಞಾನಾಮೃತವೆಂಬ ಹಾಲನ್ನು ಕರೆದುಕೊಳ್ಳುವವಳು ಉಷಾದೇವಿಯು, **ಆಯತೀ** ಆಗಮಿಸುತ್ತಿರುವ ಪ್ರಾಪ್ತವಾಗುವ, **ಉಚ್ಛನ್ತೀ** ಅಜ್ಞಾನಾಂಧಕಾರವನ್ನು ನಿವಾರಿ ಸುತ್ತಾ ತಮಸ್ಸನ್ನು ನಾಶಮಾಡುತ್ತಾ, **ಪ್ರತ್ಯದರ್ಶಿ ಉ** ಎಲ್ಲರಿಗೂ ಗೋಚರ ವಾಗುತ್ತಾಳೆ, ಕಾಣಿಸಿಕೊಳ್ಳುತ್ತಾಳೆ, **ಚಕ್ಷುಷಾ** ಈ ಉಷೆಯ ದರ್ಶನದಿಂದ, **ಮಹೀತಮಃ** ಗಾಢಾನ್ಧಕಾರವು, **ಅಪ ವೃಣುತೇ** ದೂರವಾಗಿ ನಾಶವಾಗಿ, **ಸೂನರೀ** ಉಷೋನಾಮ - ನಿ.ಘಂ.೧.೮ ॥ ಜನರ ಕಣ್ಣುಗಳಿಗೆದುರಾಗುವ ಅಂಧಕಾರವನ್ನು ದೂರೀಕರಿಸಿ ಮಾರ್ಗದರ್ಶನ ಮಾಡುವ ಉಷಾದೇವಿಯು, **ಜ್ಯೋತಿಃ ಕೃಣೋತಿ** ಪ್ರಕಾಶವನ್ನುಂಟು ಮಾಡುತ್ತಾಳೆ.

ದ್ಯುಲೋಕದ ಸೂರ್ಯನ ಮಗಳು ಉಷಾದೇವಿಯು ಬಿಜಯ ಮಾಡುತ್ತಾ ಗಾಢಾಂಧಕಾರವನ್ನು ನಾಶಮಾಡಿ ಗೋಚರಿಸುತ್ತಾಳೆ. ಹಾಗೂ ಲೋಕಕ್ಕೆ ಪ್ರಕಾಶವನ್ನುಂಟು ಮಾಡುತ್ತಾ ಮಾರ್ಗದರ್ಶನ ಮಾಡುತ್ತಾಳೆ.

*ಆ ದ್ಯುಲೋಕದ ಕನ್ಯೆ ತಾನುಷೋದೇವಿ ಬೆಳಗೊಳ್*
*ವ್ಯೋಮರಂಗಸ್ಥಳದ ಶೈಲೂಷೆ ಸದೆದು ತಮಮಂ ।*

ಜಗದ ಕಂಗಳಿಗೆ ಮಂಗಳವನೆಸಗುವಳು ನಲವಿಂ
ಸಕಲಸೃಷ್ಟಿಗೆ ಜೀವಕಾಂತಿಮಾರ್ಗವನೆ ತೋರ್ಪಳ್ ॥

## ಋಕ್ - ೩೦೪

ವಸಿಷ್ಠೋ ಮೈತ್ರಾವರುಣಿಃ । ಬೃಹತೀ ಅಶ್ವಿನೌ ॥

೩ ೧ ೨ ೩ ೧ ೨ ೩ ೧ ೨
ಇಮಾ ಉವಾಂ ದಿವಿಷ್ಟಯ ಉಸ್ರಾ ಹವನ್ತೇ ಅಶ್ವಿನಾ ।

೩ ೧ ೨ ೩ ೧ ೨ ೩ ೧ ೨ ೩ ೧ ೨೦
ಅಯಂ ವಾ ಮಹ್ವೇಽವಸೇ ಶಚೀವಸೂ ವಿಶಂವಿಶ ಹಿ ಗಚ್ಛಥಃ ॥

೩ ೨ ೩ ೧ ೨೦ ೩ ೨ ೩ ೨ ೩
ಇಮಾಃ - ಉ - ವಾಂ - ದಿವಿಷ್ಟಯಃ । ಉಸ್ರಾ - ಉ - ಸ್ರಾ - ಹವನ್ತೇ - ಅಶ್ವಿ

೨ ೩ ೧ ೨೦ ೩ ೧
ನಾ ॥ ಅಯಂ - ವಾಂ - ಅಹ್ವೇ - ಅವಸೇ - ಶಚೀವಸೂ - ಶಚೀ - ವಸೂಇ

೨ ೧ ೨೦ ೧ ೨೦ ೩ ೨೦ ೧ ೨೦
ತಿ । ವಿಶಂವಿಶಂ - ವಿಶಂ - ವಿಶಂ - ಹಿ - ಗಚ್ಛಥಃ ॥ ೨.೩೦೪ ॥

ಅಶ್ವಿನೋಃ ಸಾಮ । ಅಶ್ವಿನೌ ಬೃಹತೀಚ್ಛನ್ದಃ ॥ ಅಶ್ವಿನೌ ವಾ ॥

೨ ೦ ೦ ೩ ೫೦ ೨ ೦
೩೦೪.೧. ಇಮಾಉವಾನ್ದಿವಿಷ್ಟಯಾಽ೨೩೪ಐಹೀ ॥ ಉಸ್ರಾಹವ

೦ ೩ ೫೦ ೨ ೦ ೦ ೦ ೦
ನ್ತೇಅಶ್ವಿನಾಽ೨೩೪ಐಹೀ ॥ ಅಯಂವಾಮಹ್ವೇವಸೇಶಚೀ

^ ೩ ೫೦ ೨ ೩
ವಸೂಽ೨೩೪ಐಹೀ ॥ ವಿಶಂವಿಶ ಹಿಗಚ್ಛಥಾಽ೨೩೪

೫೦ ೪
ಐಹೀ । ಹೋ೬೫ಇ ॥ ಡಾ ॥

*ದೀ - ೧೨ । ಪ - ೬ । ಮಾ - ೭ । ಚೇ । ೨೫ । ೫೧೭ ॥*

**ಇಮಾಃ ದಿವಿಷ್ಟಯಃ** ದಿವಮಿಚ್ಛನ್ತ್ಯಃ ಪ್ರಜಾಃ ಋತ್ವಿಜೋಽಪಿ ಉ ಇತಿ ತುಚಾರ್ಥೇ । ಹೇ ಅಶ್ವಿನಾ! **ಅಶ್ವಿನೌ! ಉಸ್ರೌ!** ವಾಸಕೌ! **ವಾಂ** ಯುವಾಂ **ಹವನೇ** ಆಹ್ವಯನ್ತಿ । ಅಯಮಹಂ ವಸಿಷ್ಠೋಽಪಿ ಹೇ **ಶಚೀವಸೂ!** ಕರ್ಮಧನೌ! **ವಾಂ** ಯುವಾಂ **ಅವಸೇ**ಽಸ್ಮದ್ರಕ್ಷಣಾಯ ಯುವಯೋಸ್ತರ್ಪಣಾಯ ವಾ **ಅಹ್ವೇ** ಆಹ್ವಯಾಮಿ । ಕಿಮರ್ಥಮೇವಂ ಪ್ರಜಾಮಪ್ಯಯ ಅಪೀತ್ಯಾದರೋಕ್ತಿರಿತಿ ತತ್ರಾಹ । **ವಿಶಂ ವಿಶಂ ಹಿ ಗಚ್ಛತಃ** । ಹಿ ಯಸ್ಮಾತ್ ಸರ್ವಾಃ ಸ್ತುತಿಕರ್ತ್ರೀಃ ಪ್ರಜಾಃ ಪ್ರತಿ ಯುವಾಂ ಗಚ್ಛಥಃ ಖಲು ತಸ್ಮಾದೇವಮುಚ್ಯತ ಇತಿ

**ಅಶ್ವಿನೌ** ಯದ್ ವ್ಯಶ್ನುವಾತೇ ಸರ್ವಂ ರಸೇನಾನ್ಯೋ । ಜ್ಯೋತಿಷಾನ್ಯಃ । ಅಶ್ವೈರಶ್ವಿನಾ ವಿತ್ಯಾರ್ಣವಾಭಃ । ತತ್ ಕಾವಶ್ವಿನೌ ದ್ಯಾವಾ ಪೃಥಿವ್ಯಾವಿತ್ಯೇಕೇಽಹೋರಾತ್ರಾವಿತ್ಯೇಕೇ ಮೂರ್ಧಾಚನ್ದ್ರಮಸಾವಿತ್ಯೇಕೇ ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ । ತಯೋಃ ಕಾಲ ಊರ್ಧ್ವಮರ್ಧರಾತ್ರಾತ್ ಪ್ರಕಾಶೀಭಾವಸ್ಯಾನುವಿಷ್ಟಮ್ಭಮನುತ್ತಮೋ ಭಾಗೋ ಹಿ ಮಧ್ಯಮೋ ಜ್ಯೋತಿರ್ಭಾಗ ಆದಿತ್ಯಃ । ಇತಿ ನೈ. ದೈ.೬.೧ ॥

ಅಶ್ವಿನೀ ದೇವತೆಗಳೇ **ಇಮಾಃ ದಿವಿಷ್ಟಯಃ** ಸ್ವರ್ಗಫಲಾಕಾಂಕ್ಷಿಗಳಾದ ಈ ಪ್ರಜೆಗಳೂ, ಉ ಋತ್ವಿಜರೂ, **ಉಸ್ರೌ** ಉಸ್ರೇತಿ ಗೋ ನಾಮ, ಉಸ್ರಾ ಇವ ಗೋವುಗಳು ತಮ್ಮ ಸಂತಾನವಾದ ಕರುಗಳನ್ನು ಅಂಬಾ ಆದಿ ಹೃದಯಾಂತರಾಳದ ಅವ್ಯಕ್ತಾರ್ಥ ಧ್ವನಿಗಳಿಂದ ಪ್ರೀತಿ ವಿಶ್ವಾಸಪೂರ್ವಕವಾಗಿ ಹತ್ತಿರಕ್ಕೆ ಕರೆಯುವಂತೆಯೇ ಎಲ್ಲರಿಗೂ ಆಶ್ರಯದಾತರಾದ ವ್ಯಾಪಕರಾದ, **ಶಚೀವಸೋ** ಬುದ್ಧಿ ಮತ್ತು ಧನವನ್ನು ಅನುಗ್ರಹಿಸುವ ಕರ್ಮವನ್ನೇ ಧನವಾಗಿಟ್ಟುಕೊಂಡಿ

ರುವ, ವಾಮ್ ನಿಮ್ಮಿಬ್ಬರನ್ನೂ, ಅಯಮ್ ಈ ವಸಿಷ್ಠನಾದ ನಾನೂ ಸಹ, **ವಿಶಂ ವಿಶಂ** ನಿಮ್ಮನ್ನು ಸ್ತುತಿಸುವವರ ಬಳಿಗೆ ಬಹು ಉದಾರಭಾವದಿಂದಲೂ ವಿಶ್ವಾಸದಿಂದಲೂ, **ಗಚ್ಛಥಃ** ದಯಮಾಡಿಸುವವರಾದ ನಿಮ್ಮನ್ನು, **ಹವನ್ತೇ** ಆಹ್ವಾನಿಸುವೆವು.

ಯಜ್ಞಾದಿ ಕರ್ಮಗಳೇ ಧನವಾಗುಳ್ಳವರೂ ಸೂರ್ಯಚನ್ದ್ರರಂತೆ ತೇಜೋವಿಶಿಷ್ಟರೂ ಎಲ್ಲರ ಆಶ್ರಯದಾತರೂ ಸ್ತುತಿಸುವ ಭಕ್ತರಲ್ಲಿಗೆ ಉದಾರ ಭಾವದಿಂದಲೂ ವಿಶ್ವಾಸದಿಂದಲೂ ದಯಮಾಡಿಸುವವರೂ ಆದ ಅಶ್ವಿನೀ ದೇವತೆಗಳೇ ನಿಮ್ಮನು ಹಸುವು ತನ್ನ ಸಂತಾನವಾದ ಕರುವನ್ನು ಹಾಲುಕುಡಿಯಲು ಅಂಬಾ ಆದಿ ವರ್ಣನೆಗೆ ಮೀರಿದ ಹೃದಯಾಂತರಾಳದ ಪ್ರೀತಿಯಿಂದ ಕರೆಯುವಂತೆ ಸ್ವರ್ಗಫಲಾಕಾಂಕ್ಷಿಗಳಾದ ಈ ಪ್ರಜೆಗಳೂ ಋತ್ವಿಜರೂ ಭಕ್ತಿಯಿಂದ ಆಹ್ವಾನಿಸುತ್ತೇವೆ.

*ಯಜ್ಞಧನರೇ! ಸೂರ್ಯಚಂದ್ರಸಮರೇ! ಭಕ್ತರಂ*
*ಪೊರೆವಶ್ವಿನಿಗಳೆ! ನಿಮ್ಮಂ ಕರೆವೆವಾಪ್ರೊಲ್ಮೆಯಿಂ ।*
*ತಾಯಿಗೋವಳ್ತಿಯಿಂ ಕರುಗಳಂ ಕರೆವ ತೆರದಿಂ*
*ಸ್ವರ್ಗಕಾಮಿಗಳಾದ ಜನ್ನಿಗರ್ ಕರೆಯುತಿಹರು ॥*

## ಋಕ್ - ೩೦೫

ಅಶ್ವಿನೌ ವೈವಸ್ವತೌ । ಬೃಹತೀ ಅಶ್ವಿನೌ ॥

೨ ೩ ೧ ೨ ೩ ೧ ೨ ೩ ೧ ೨
**ಕು ಷ್ಠಃ ಕೋ ವಾಮಶ್ವಿನಾ ತಪಾನೋ ದೇವಾ ಮರ್ತ್ಯಃ ।**

೩ ೧ ೨ ೩ ೧ ೨೦ ೩ ೨ ೩ ೨ ೩ ೨ ೩ ೧ ೨
ಘ್ನತಾವಾಮಶ್ನಯಾ ಕ್ಷಪಮಾಣೋ ಽಶುನೇತ್ಥಮು ಆದ್ವನ್ಯಥಾ ॥

೨ ೩ ೨ ೩ ೨ ೩ ೧ ೨೦ ೩ ೨
ಕು - ಷ್ಠಃ - ಕಃ - ವಾಂ - ಅಶ್ವಿನಾ । ತಪಾನಃ - ದೇವಾ - ಮರ್ತ್ಯಃ ॥ ಘ್ನತಾ -

೨ ೧ ೨೦ ೩ ೧ ೨ ೩ ೨ ೩ ೨ ೩
ವಾಂ - ಅಶ್ನಯಾ - ಕ್ಷಪಮಾಣಃ - ಅಂಶುನಾ । ಇತ್ಥಮ್ - ಉ - ಆತ್ - ಉ

೧ ೨ ೩ ೧ ೨೦
- ಅನ್ಯಥಾ - ಅನ್ - ಯಥಾ ॥ *೩. ೩೦೫ ॥*

ಅಶ್ವಿನೋಃ ಸಂಯೋಜನಮ್ ॥ ಅಶ್ವಿನೌ ಬೃಹತೀನ್ದ್ರಃ । ಅಶ್ವಿನೌ ವಾ ॥

೪ ೫ ೪೦ ೫೦ ೦ ೪ ೧ ೦ ೨೦ ೦ ೧ ೬
*೩೦೫.೧.* ಕುಷ್ಠ ಕೋವಾಮಶ್ವಿನಾಔ ॥ ತಾಪಾನೋದೇ । ವಾಮ

೨ ೧ ೨ ೨ ೩ ೨
ರ್ತಾಯಾಽ೩: । ಹೋವಾಽ೩ಹಾಽ೩೪ಇ । ಘ್ನತಾಽ೩೪

೩೦ ೨ ೨ ೧ ೨ ೨
ವಾಮಾಽ೧ । ಶ್ನಾಯಾಽ೩ । ಹೋವಾಽ೩ಹಾಽ೩೪ಇ ।

೩ ೨ ೩೦ ೨ ೧ ೨ ೧ ೨
ಕ್ಷಪಾಽ೩೪ಮಾಣಾಃ । ಆಂಶೂನಾಽ೩ । ಹೋವಾಽ೩

೨ ೩ ೨ ೩ ೨ ೧ ^
ಹಾಽ೩೪ಇ ॥ ಇತ್ಥಾಽ೩೪ಮುವಾಽ೩ತ್ ॥ ಉವಾಽ೨

೩ ೨ ೫೦ ೦ ೩ ೫
ನ್ । ಯಥಾಽ೩೪ಔಹೋವಾ ॥ ಊಽ೨೩೪ಪಾ ॥

*ದೀ - ೧೦ । ಪ - ೧೪ । ಮಾ - ೯ । ಬ್ವೇ । ೨೬ । ೫೧೮ ॥*

ಅಶ್ವಿನಾ! **ಅಶ್ವಿನೌ!** ಹೇ ದೇವ! ದೇವೌ ದ್ಯೋತಮಾನೌ! **ವಾಂ** ಯು ವಾಂ **ಕುಷ್ಠಃ** ಕೌ ಪೃಥಿವ್ಯಾಂ ವರ್ತಮಾನಃ **ಕೋ** ಮರ್ತ್ಯಃ ಮರಣ ಧರ್ಮಾ ಮನುಷ್ಯಃ ಸ್ತೋತಾ .**ತಪಾನಃ** ತಾಪನಃ ಪ್ರಕಾಶಕೋ ಭವತಿ ಇತಿ ಶೇಷಃ । ನ ಕಶ್ಚಿಚ್ಛಕ್ನುಯಾದಿತ್ಯರ್ಥಃ । **ವಾಂ** ಯುವಯೋರರ್ಥಾಯ **ಅಶ್ನಯಾ** ಅಶ್ನ ಶಬ್ದಾದ್ಭಿಸೋ ಯಾ ದೇಶಃ ವ್ಯಾಪ್ತೈರಭಿಷವಸಾಧನ್ಯೆರಶ್ಮಭಿಃ । **ಘ್ನತಾ** ಹನ್ಯಮಾ ನೇನ ಅಭಿಷೂಯಮಾಣೇನ **ಅಂಶುನಾ** ಸೋಮೇನ । ಯದ್ವಾ ಅಸ್ಮಾಭಿರ ಭಿಷುತೇನ **ಘ್ನತಾ** ಯುವಾಮಭಿಗಚ್ಛತಾ **ಅಂಶುನಾ** ಸೋಮೇನ **ಕ್ಷಯಮಾಣಃ** ಕ್ಷೀಯಮಾಣೋ ಯಜಮಾನಃ **ಇತ್ಥಮ್** ಇತ್ಥಮೇನ ಭವತಿ ಅತ್ಯಂತ ಸಮೃದ್ಧೋ ಭವತೀತ್ಯರ್ಥಃ । **ಆದ್ವನ್ ಯಥಾ** ಅಭಿಮತಾನ್ನರಸಾದಿಭಕ್ಷಣವಾ ನ್ ರಾಜಾದಿರಿವ । ಸ ಯಥಾ ಪ್ರವೃದ್ಧೋ ದೃಷ್ಟಾಂತ ವಿಷಯಾ ಭವತಿ ತದ್ವದ ಯಮಪಿ ಭವತೀತ್ಯರ್ಥಃ ॥

**ದೇವಾ ಅಶ್ವಿನಾ** ಪ್ರಕಾಶವಂತರಾದ ಅಶ್ವಿನೀ ದೇವತೆಗಳೇ, **ಕುಷ್ಠಃ ಕಃ** ಈ ಭೂಮಿಯಲ್ಲಿರುವ ಯಾವ ಮನುಷ್ಯ ತಾನೇ, **ವಾಮ್** ತಮ್ಮನ್ನು, **ಕಪಾನಃ** ಬೆಳಗಿಸಿಯಾನು? ಯಾರೂ ಬೆಳಗಿಸಲಾರರು, **ವಾಮ್** ತಮಗಾಗಿ, **ಅಶ್ನಯಾ** ಸೋಮರಸವನ್ನು ತೆಗೆಯುವ ವಿಶಿಷ್ಟ ಕಲ್ಲಿನಿಂದ, **ಘ್ನತಾ** ಕುಟ್ಟಿ ಜಜ್ಜಿ ತಯಾರಿಸಿರುವ, **ಅಂಶುನಾ** ಸೋಮರಸದಿಂದ, **ಕ್ಷಯಮಾಣಃ** ಕ್ಷಯತಿ ಐಶ್ವ ರ್ಯಕರ್ಮಾ - ನಿ.ಘಂ.೩.೨೧ ॥ ಉಂಟಾದ ಶ್ರಮದಿಂದ ಆಯಾಸ ಗೊಂಡ ಯಜಮಾನನು, **ಆದ್ಯನ್ ಯಥಾ** ಅನ್ನಾದಿ ಆಹಾರವನ್ನು ಯಥೇಚ್ಛ ವಾಗಿ ಭಕ್ಷಿಸುವಂತೆಯೇ ಬಹು ಐಶ್ವರ್ಯವಂತನಾಗುತ್ತಾನೆ.

ಸ್ವಯಂ ತೇಜೋವಿಶಿಷ್ಟ ಪ್ರಕಾಶವಂತರಾದ ಅಶ್ವಿನೀ ದೇವತೆಗಳೇ ಈ ಭೂಲೋಕದಲ್ಲಿನ ಯಾವ ಮನುಷ್ಯನೂ ನಿಮ್ಮನ್ನು ಪ್ರಕಾಶಿಸಲು, ಬೆಳಗುವಂತೆ ಮಾಡಲು ಶಕ್ತನಲ್ಲ, ನಿಮಗಾಗಿ ವಿಶಿಷ್ಟ ಕಲ್ಲಿನಿಂದ ಸೋಮಲತೆಯನ್ನು ಜಜ್ಜಿ

ವಿಧಿವತ್ತಾಗಿ ಸೋಮವನ್ನು ಸಿದ್ಧಪಡಿಸುವ ಯಜಮಾನನು ಈ ತೆರನ ಕ್ಲಿಷ್ಟ ಕರ್ಮದಿಂದ ಆಯಾಸಗೊಂಡವನು ಯಥೇಚ್ಛ ಆಹಾರವನ್ನು ಭಕ್ಷಿಸುವಂತೆ ಐಶ್ವರ್ಯವಂತನಾಗಿ ಸಮೃದ್ಧಿಯನ್ನು ಪಡೆಯುತ್ತಾನೆ.

*ಸ್ವಪ್ರಕಾಶಾಶ್ವಿನಿಗಳೇ! ಜಗದ ಮನುಜರಾರುಂ*
*ನಿಮ್ಮವೊಲ್ ಬೆಳಗಲಮ್ಮರ್; ನಿಮಗೆನುತ್ತೆ ವಿಧಿಯಿಂ ।*
*ಸೋಮಮಮಂ ಸಜ್ಜುಗೆಯ್ದಿರ್ಪನೀ ಯಜಮಾನನು*
*ಈ ಸವನದಿಂದನ್ನಸಂಪಾದವನಾತನೊಲಿವಂ ॥*

## ಋಕ್ - ೩೦೬

ಪ್ರಸ್ಕಣ್ವಃ ಕಾಣ್ವಃ । ಬೃಹತೀನ್ದ್ರಃ ॥

೩ ೨ ೩ ೧ ೨ ೩ ೨u ೩ ೧ ೨
ಅಯಂ ವಾಂ ಮಧುಮತ್ತಮಃ ಸುತಃ ಸೋಮೋ ದಿವಿಷ್ಟಿಷು ।

೧ ೨ ೩ ೧ ೨ ೩ ೧ ೨೦ ೩ ೧ ೨
ತಮಶ್ವಿನಾ ಪಿಬತಂ ತಿರೋಅಹ್ನ್ಯಂ ಧತ್ತ ಀ ರತ್ನಾನಿ ದಾಶುಷೇ ॥

೩ ೨ ೩ ೧ ೨೦ ೩ ೨ ೧ ೨೦ ೧ ೨೦ ೩
ಅಯಂ – ವಾಂ – ಮಧುಮತ್ತಮಃ ॥ ಸುತಃ – ಸೋಮಃ – ದಿವಿಷ್ಟಿಷು । ತಂ – ಅ

೧ ೨ ೩ ೨ ೩ ೨ ೧ ೨೦
ಶ್ವಿನಾ – ಪಿಬತಂ – ತಿರೋ ಅಹ್ನ್ಯಂ – ತಿರಃ – ಅಹ್ನ್ಯಮ್ । ಧತ್ತಂ – ರತ್ನಾನಿ –

೩ ೧ ೨
ದಾಶುಷೇ ॥ ೪.೩೦೬ ॥

ಅಶ್ವಿನೋಃ ಸಾಮ । ಅಶ್ವಿನೌ ಬೃಹತೀನ್ದ್ರಃ ಅಶ್ವಿನೌ ವಾ ॥

೩೦೬.೧. ಅಯಾऽ೩ಳಮ್ । ಅಯಂವಾಮ । ಧುಮತ್ತಾऽ೬
ಮಾಃ ॥ ಸುತಃಸೋಮೋऽ೨ದಿವಿಷ್ಟಿಷು । ಓऽ೩ಹಾ । ಓऽ
೩ಹಾऽ೩ಳ । ಓಹಾ । ತಾಮಶ್ವಿನಾಪಿಬತನ್ತಿರೋಅಹ್ನ್ಯ
ಮ್ । ಓऽ೩ಹಾ । ಓऽ೩ಹಾऽ೩ಳ । ಓಹಾ ॥ ಧತ್ತಾಙ್ರಾऽ
೧ತ್ನಾऽ೨ । ಓऽ೩ಹಾ । ಓऽ೩ಹಾऽ೩ಳ । ಓಹಾ ॥ ನಿದಾऽ
೨೩ । ಶೂऽ೨ಷಾऽ೨೩ಳಔಹೋವಾ ॥ ಊऽ೨೩ಳಪಾ ॥

*ದೀ - ೧೦ । ಪ - ೧೮ । ಮಾ - ೫ । ಬ್ವು । ೨೭ । ೫೧೯ ॥*

ಹೇ **ಅಶ್ವಿನಾ!** ಅಶ್ವಿನೌ! **ವಾಂ** ಯುವಯೋಃ **ದಿವಿಷ್ಟಿಷು** ದಿವ ಏಷಣೇಷು ಯಜ್ಞೇಷು ಅಯಂ ಪುರೋವರ್ತೀ ಸೋಮಃ **ಸುತೋ** ಅಭಿಷುತಃ ಕೀದೃಶಃ? **ಮಧುಮತ್ತಮಃ** । ಅತಿಶಯೇನ ಮಾಧುರ್ಯವಾನ್ **ತಿರೋ ಅಹ್ನ್ಯಂ** ತಿರೋಭೂತೇ ಪೂರ್ವಸ್ಮಿನ್ದಿನೇ ಅಭಿಷುತಂ ತಂ ಸೋಮಂ **ಪಿಬನ್ತಂ** । **ದಾಶುಷೇ** ಹವಿರ್ದತ್ತವತೇ ಯಜಮಾನಾಯ **ರತ್ನಾನಿ** ರಮಣೀಯಾನಿ ಧನಾನಿ **ಧತ್ತಂ** ಪ್ರಯಚ್ಛತಮ್ ॥ ದಿವಿಷ್ಟಿಷು ಋತಾವೃಧೇ ಇತಿ ಚ ಪಾಠೌ ॥

**ಅಶ್ವಿನಾ** ಅಶ್ವಿನೀ ದೇವತೆಗಳೇ, **ವಾಮ್** ನಿಮಗಾಗಿ, **ತಿರೋ ಅಹ್ನ್ಯಮ್ ಸುತಃ** ಮೊದಲನೆಯ ದಿನದ ತೃತೀಯ ಸವನದಲ್ಲಿ ಅಂದರೆ ನಿನ್ನೆಯ ದಿನ

ವಿಧಿಪೂರ್ವಕವಾಗಿ ಹಿಂಡಿ ಸಿದ್ಧಪಡಿಸಿಟ್ಟಿರುವ, **ಮಧುಮತ್ತಮಂ** ಅತ್ಯಂತ ಮಧುರವಾಗಿರುವ, **ಅಯಮ್** ಈ ಸೋಮರಸವನ್ನು, **ಪಿಬನ್ತಮ್** ಪಾನ ಮಾಡೋಣವಾಗಲಿ, **ದಿವಿಷ್ಟಿಷು** ಮೋಕ್ಷಾರ್ಥವಾಗಿ, ಜ್ಯೋತಿಷ್ಟೋಮಾದಿ ಯಾಗಫಲವಾಗಿ, **ದಾಶುಷೇ** ಹವಿಸ್ಸನ್ನರ್ಪಿಸುವ ಯಜಮಾನನಿಗಾಗಿ, **ರತ್ನಾನಿ** - ರಮಣೀಯವಾದ ರತ್ನಾದಿ ಧನವನ್ನು, **ಧತ್ತಮ್** ಅನುಗ್ರಹಿಸಿ.

ಅಶ್ವಿನೀ ದೇವತೆಗಳೇ! ಯಜ್ಞದ ತೃತೀಯ ಸವನದಲ್ಲಿ ತಮಗಾಗಿ ಸಿದ್ಧಪಡಿಸಿಟ್ಟಿರುವ ಬಹು ಮಧುರವಾದ ಸೋಮರಸವನ್ನು ಪಾನಮಾಡಿ ಜ್ಯೋತಿಷ್ಟೋಮಾದಿ ಯಾಗಫಲವಾಗಿ ಹವಿಸ್ಸನ್ನರ್ಪಿಸುವ ಯಜಮಾನನಿಗೆ ರತ್ನಾದಿ ಅಮೂಲ್ಯ ಸಂಪತ್ತನ್ನು ಅನುಗ್ರಹಿಸೋಣವಾಗಲಿ.

ಅಶ್ವಿನೀದೇವರೇ! ಮೂರನೆಯ ಸವನದಲ್ಲಿ
ನಿಮಗೆಂದು ಮುಡಿಪಾದ ಸವಿಯಾದ ಸೋಮರಸಮಂ ।
ಕೂರ್ಮೆಯಿಂದೀಂಟಿ ನೀಂ ಸೋಮಸಂಸ್ಥಾಸಪ್ತಕ-
ಶ್ರೇಷ್ಠಫಲಮಂ ನೀಡಿ ಜನ್ನಿಗರ ಪೊರೆಸಿಮೊಲವಿಂ ॥

## ಋಕ್ - ೩೦೭

ಮೇಧಾತಿಥಿ - ಮೇಧ್ಯಾತಿಥೀ ಕಾಣ್ವೌ । ಬೃಹತೀನ್ದ್ರಃ ॥

೨ ೩ ೧ ೨ ೩ ೧ ೨ ೩ ೨ ೩ ೧ ೨ ೩ ೧ ೨
ಆ ತ್ವಾ ಸೋಮಸ್ಯ ಗಲ್ದಯಾ ಸದಾ ಯಾಚನ್ನಹಂ ಜ್ಯಾ ।

೧ ೨ ೩ ೧ ೨ರ ೩ ೧ ೨ರ ೩ ೧ ೨
ಭೂರ್ಣಿಮ್ಮೃಗಂ ನ ಸವನೇಷು ಚುಕ್ರುಧಂ ಕ ಈಶಾನಂ ನ ಯಾಚಿಷತ್ ॥

೨ ೩ ೧ ೨೦ ೧ ೨೦ ೧ ೨೦ ೧ ೨೦ ೩ ೨ ೩
ಆ - ತ್ವಾ - ಸೋಮಸ್ಯ - ಗಲ್ದಯಾ । ಸದಾ - ಯಾಚನ್ - ಅಹಂ - ಜ್ಯಾ ।।

೧ ೨೦ ೩ ೨ ೧ ೨೦ ೩ ೨ ೧ ೨೦
ಭೂರ್ಣಿಂ - ಮೃಗಂ - ನ - ಸವನೇಷು - ಚುಕ್ರುಧಂ । ಕಃ - ಈಶಾನಂ - ನ -

೩
ಯಾಚಿಷತ್ ॥ ೫.೩೦೭ ॥

ಸೋಮಸಾಮ । ಸೋಮೋ ಬೃಹತೀನ್ದ್ರಃ । ಸೋಮೋ ವಾ ॥

೫೦ ೦ ೦ ೨ ೧ ^ ೩ ೫೦ ೦
೩೦೭.೧. ಆತ್ವಾಸೋಮಾ ॥ ಸ್ಯ । ಗಲ್ದಾ೨ಯಾ೨೩೪ಔಹೋವಾ ।

೧ ೩೦ ೧೦ ೨ ೧ ೧ ೨^ ೩
ಸದಾ೨ಯಾಚನ್ನಹಂಜಿಯಾ೨೩ । ಭೂರ್ಣಾ೭ಓ೨೩೪

೫ ೨ ೧ ೨೦ ೧೦ ೨
ವಾ । ಮೃಗನ್ನಸವನೇಷುಚುಕ್ರುಧಮ್ ॥ ಕಈಶಾ೨೩ನಾ

೧ ೦ ೨ ೧ ೨ ೧
ಮ್ ॥ ನಾಯಾಚಿಷತ್ । ಇಡಾ೨೩ಭಾ೩೪೩ । ಓ೨೩

೪೫ಇ ॥ ಡಾ ॥

ದೀ - ೧೦ । ಪ - ೧೧ । ಮಾ - ೭ । ಪೇ । ೨೮ । ೫೨೦ ॥

ಹೇ ಇನ್ದ್ರ! ತ್ವಾ ತ್ವಾಂ ಸವನೇಷು ಯಜ್ಞೇಷು **ಸೋಮಸ್ಯ ಗಲ್ದಯಾ** ಗಾಲನೇನ ಆಸ್ರಾವಣೇನ । **ಜ್ಯಾ** ಜಯಶೀಲಯಾ ಸ್ತುತ್ಯಾ ಚ ಅತ ಏವ ಗಿರೇತಿ ಬಹ್ವೃಚಾಃ ಪಠನ್ತಿ ತಯಾಯುಕ್ತಃ **ಅಹಂ ಸದಾ** ಸರ್ವದಾ **ಯಾಚನ್** ಯಾಚಮಾನಃ ಸನ್ **ಆಚುಕ್ರುಧಂ** ಮಾ ಚುಕ್ರುಧಂ ಕ್ರುಧಮಪನಯಾನಿ ಆ ಇತಿ ಪ್ರತಿಷೇಧಾರ್ಥಃ ನಿಪಾತಾನಾಮನೇಕಾರ್ಥತ್ವಾತ್ । ಅತ ಏವ ಬಹ್ವೃಚಾಃ ಮಾತ್ವೇ

ತ್ಯಾಮನನ್ತಿ । ಬಹುಶೋಽಯಾಚ್ಯಮಾನೇ ತ್ವಯಿ ಕ್ರೋಧೋ ಜಾಯತೇ ತಂ ಸೋಮಗಾಲನೇನ ಸ್ತುತ್ಯಾ ಚಾಪನಯಾಮೀತ್ಯರ್ಥಃ । ಕೀದೃಶಂ ತ್ವಾಂ **ಭೂರ್ಣಿಂ** ಭರ್ತಾರಂ **ಮೃಗಂ** ನ ಸಿಂಹಮಿವ ಭೀಮಂ ಸ್ವಾಮಿ ನಃ ಇನ್ದ್ರಸ್ಯ ಯಾಚನೇ ಲೌಕಿಕಂ ನ್ಯಾಯಂ ದರ್ಶಯತಿ ಲೋಕೇ ಕೋ ವಾ ಪುರುಷಃ **ಈಶಾನಂ** ಈಶ್ವರಂ ಸ್ವಾಮಿನಂ ನ **ಯಾಚಿಷತ್** ನ ಯಾಚೇತ ಸರ್ವ ಏವ ಹಿ ಯಾಚತೇ । ಅತೋಽಹಮಪಿ ತಂ ಸ್ವಾಮಿನಂ ಯಾಚೇ ಇತಿ ಭಾವಃ ॥

**ಭೂರ್ಣಿಂ ಮೃಗಂ** ನ ವನರಾಜ ಸಿಂಹದಂತೆ ಭಯಂಕರನಾದ, **ತ್ವಾಂ** ಇನ್ದ್ರನೇ ನಿನ್ನನ್ನು, **ಸವನೇಷು** ಯಜ್ಞದ ಸವನತ್ರಯಗಳಲ್ಲೂ, **ಸೋಮಸ್ಯ ಗಲ್ದಯಾ** ಸೋಮರಸದಿಂದ ತುಂಬಿಹರಿಯುವ ಪಾತ್ರೆಗಳ ಅರ್ಪಣೆಯಿಂದಲೂ, ಜ್ಯಾ ವಿಜಯ ದ್ಯೋತಕ ಸ್ತೋತ್ರಗಳಿಂದಲೂ, ಸದಾ **ಯಾಚನ್ ಅಹಂ** ಸದಾ ಯಾಚಿಸುತ್ತಿರುವ ನಾನು, **ಆಚುಕ್ರುಧಂ** ಕೋಪಗೊಳ್ಳದಿರುವಂತೆ ಮಾಡುತ್ತೇನೆ, **ಕಃ ಈಶಾನಂ ನ ಯಾಚಿಷತ್** ಸರ್ವೇಶ್ವರನಾದ ಇನ್ದ್ರ ಭಗವಂತನನ್ನು ಯಾರು ತಾನೆ ಯಾಚಿಸುವುದಿಲ್ಲ, ಎಲ್ಲರೂ ಯಾಚಿಸುತ್ತಾರೆ.

ಭಯಂಕರನಾದ ಮೃಗರಾಜ ಸಿಂಹದಂತಿರುವ ಇನ್ದ್ರಭಗವಂತನೇ ನಿನಗೆ ಸದಾ ಬೇಡುತ್ತಲೇ ಇರುವ ನಾನು ಯಜ್ಞದ ಸವನ ತ್ರಯಗಳಲ್ಲೂ ಸೋಮರಸದಿಂದ ತುಂಬಿ ಹರಿಯುವ ಪಾತ್ರೆಗಳ ಅರ್ಪಣೆಯಿಂದಲೂ ಸದಾ ವಿಜಯಪ್ರದವಾದ ವೇದಮನ್ತ್ರಗಳ ಸ್ತೋತ್ರಾದಿ ಸಾಮಗಾನಗಳಿಂದಲೂ ನೀನು ಕೋಪಗೊಳ್ಳದಿರುವಂತೆ ಮಾಡುತ್ತೇನೆ. ಸರ್ವೇಶ್ವರನಾದ ಇನ್ದ್ರಭಗವಂತನನ್ನು ಮಾನವರೆಲ್ಲರೂ ತಮ್ಮ ತಮ್ಮ ಒಂದಲ್ಲೊಂದು ಕಾಮನೆಗಳ ಈಡೇರಿಕೆಗಾಗಿ ಬೇಡಿಕೊಳ್ಳುತ್ತಲೇ ಇರುತ್ತಾರೆ.

ಮೃಗರಾಜನಂತಿರ್ಪ ಮಘವಂತ! ನಿನ್ನನೆಂದುಂ
ಬೇಳ್ವನಾಂ ಸವನತ್ರಯದೆ ಸೋಮಭರಿತಪಾತ್ರಂ ।
ಸಲಿಸಿ ಸಾಮಂಗಳಂ ಪಾಡಿ ನಿನ್ನಂ ರಂಜಿಪೆಂ
ಸರ್ವೇಶನೊಳ್ ನರರ್ ಬಯಕೆಗಳ ಬೇಳ್ವರಲ್ತೆ ॥

## ಋಕ್ - ೩೦೮

ದೇವಾತಿಥಿಃ ಕಾಣ್ವಃ । ಬೃಹತೀನ್ದ್ರಃ ॥

೧ ೨ ೩ ೨ ೩ ೨u ೩ ೧ ೨
ಅಧ್ವರ್ಯೋ ದ್ರಾವಯಾ ತ್ವꣳ ಸೋಮಮಿನ್ದ್ರಃ ಪಿಪಾಸತಿ ।

೧ ೨ ೩ ೧ ೨ ೩ ೧ ೨ ೩ ೨ ೩ ೧ ೨
ಉಪೋ ನೂನಂ ಯುಯುಜೇ ವೃಷಣಾ ಹರೀ ಆ ಚ ಜಗಾಮ

೩ ೨
ವೃತ್ರಹಾ ॥ ೬.೩೦೮ ॥

೧ ೨೦ ೩ ೧ ೨ ೧ ೨೦ ೧ ೨೦ ೩ ೧ ೨೦
ಅಧ್ವರ್ಯೋ - ದ್ರಾವಯ - ತ್ವಂ । ಸೋಮಂ - ಇನ್ದ್ರಃ - ಪಿಪಾಸತಿ ॥ ಉಪ -

೩ ೨ ೩ ೧ ೨೦ ೩೦ ೧ ೨ ೩
ಉ - ನೂನಂ - ಯುಯುಜೇ - ವೃಷಣಾ - ಹರೀಇತಿ । ಆ - ಚ - ಜಗಾಮ -

೨ ೩ ೨
ವೃತ್ರಹಾ - ವೃತ್ರ - ಹಾ ॥ ೬.೩೦೮ ॥

ಆಜಮಾಯವಮ್ । ಅಜಮಾಯುರ್ಬೃಹತೀನ್ದ್ರಃ ॥

೪ ೦ ೦ ೪ ೧೧೦
೩೦೮.೧. ಅಧ್ವರ್ಯೋದ್ರಾꣳಇವಯಾತುವಾಮ್ ॥ ಸೋಮಮಿ

— ೧ ೨ — ೧ ೨೦ ೦ ೧
ನ್ನಾ೨ಽ: । ಪಿಪಾಸಾಽ೧ತೀಽ೨ । ಉಪೋಽ೨ನೂನಂ

೨ ೦ ೧ ೨ — ೦ ೧
ಯುಯುಜೇವೃ । ಷಾಣಾಽ೧ಹಾರೀಽ೨ ॥ ಆಜಾಜಾಽ೨

೨^ ೩ ೨ ೧ ೨ ^ ೪ ೫ ೪
೩ಗಾ ॥ ಮವೃತ್ರಹಾ । ಔಽ೩ಹೋವಾ । ಹೋಽ೫ಇ ॥

ಡಾ ॥ *ದೀ - ೭ । ಪ - ೧೦ । ಮಾ - ೭ । ಇ । ೨೯ । ೫೨೧ ॥*

ಹೇ **ಅಧ್ವರ್ಯೋ!** ಅಧ್ವರಸ್ಯ ನೇತಸ್ತ್ವಂ **ಸೋಮಂ** ದ್ರಾವಯ ಉತ್ತರ ವೇದಿ ಲಕ್ಷಣಂ ಸ್ಥಾನಂ ಪ್ರಾಪಯ । ಯದ್ವಾ ರಸಾತ್ಮನಾ ದ್ರವಣಶೀಲಂ ಕುರು । ಅಭಿಷುಣ್ವಿತ್ಯರ್ಥಃ । ಕಿಂ ಕಾರಣಮಿತಿ ಚೇತ್ ಇನ್ದ್ರಃ **ಪಿಪಾಸತಿ** ಸೋಮಂ ಪಾತುಮಿಚ್ಛತಿ ತ್ವಯ್ಯೈತತ್ಕಥಮವಗತಮಿತಿ ಚೇತ್ತತ್ರಾಹ **ವೃಷಣಾ** ವರ್ಷಿತಾರೌ ಯುವಾನೌ ವಾ । **ಹರೀ** ಅಶ್ವೌ **ನೂನಂ** ಅದ್ಯ **ಉಪೋ ಯುಯುಜೇ** ಉಪ ಗಮ್ಯೈವ ಸಾರಥಿರ್ಯೋಜಿತವಾನ್ ರಥೇ । **ವೃತ್ರಹಾ** ವೃತ್ರಸ್ಯ ಹನ್ತಾ ಇನ್ದ್ರಶ್ಚ **ಆಜಗಾಮ** ಆಗತವಾನ್ ॥ ಉಪೋನೂನಂ ಉಪನೂನಂ ಇತಿ ಪಾಠೌ ॥

**ಅಧ್ವರ್ಯೋ** ಅಧ್ವರ್ಯುವೇ, **ಸೋಮಮ್** ಸೋಮವನ್ನು, **ದ್ರಾವಯ** ಉತ್ತರವೇದಿಯಲ್ಲಿಡು, **ಇನ್ದ್ರಃ** ಇನ್ದ್ರನು, **ಪಿಪಾಸತಿ** ಬಾಯಾರಿರುವನು, **ವೃಷಣಾಹರೀ** ಪ್ರಾಯದ ಕುದುರೆಗಳನ್ನು, **ನೂನಮ್** ಇಂದು, **ಉಪೋಯುಯಜೇ** ಸಾರಥಿಯು ರಥಕ್ಕೆ ಹೂಡಿರುವನು, **ವೃತ್ರಹಾ** ಪಾಪ ನಾಶಕನಾದ ಇನ್ದ್ರನು, **ಆಜಗಾಮ** ಬಂದಿರುವನು.

ಅಧ್ವರ್ಯುವೇ! ಯಜ್ಞದ ನೇತಾರನಾದ ನೀನು ಸೋಮವನ್ನು ಉತ್ತರ ವೇದಿ ಎಂಬ ಜಾಗದಲ್ಲಿಡು ಅಥವಾ ಸೋಮವು ರಸವತ್ತಾಗಿರುವಂತೆ

ಸರಿಯಾಗಿ ಸಿದ್ಧಪಡಿಸು. ಪ್ರಾಯದ ಕುದುರೆಗಳನ್ನು ಹೂಡಿದ ರಥದಲ್ಲಿ ಇಂದು ಪಾಪನಾಶಕನಾದ ವೃತ್ರಹಂತಕನಾದ ಮಳೆಗೆರೆಯುವ ಭಗವಂತನಾದ ಇನ್ದ್ರನು ದಯಮಾಡಿಸಿ ಸೋಮಪಾನ ಮಾಡಲು ಅಪೇಕ್ಷಿಸುವನು.

*ಅಧ್ವರ್ಯು! ಇರಿಪ್ರುದುತ್ತರವೇದಿಯೊಳ್ ಸೋಮಮಂ*
*ಆ ರಸವನಂತೆಯೇ ಹಸನಾಗಿ ಸಜ್ಜುಗೊಳಿಸು*
*ಬಾಯಾರಿದಶ್ವಗಳ ಹೂಡಿರುವ ರಥದೆ ಕುಳಿತು*
*ಮಳೆಗರೆವ ಪುರುಹೂತನಿದನೀಂಟಲಾಗಮಿಪನು ॥*

## ಋಕ್ - ೩೦೯

ವಸಿಷ್ಠೋ ಮೈತ್ರಾವರುಣಿಃ । ಬೃಹತೀನ್ದ್ರಃ ॥

೩ ೨ ೩ ೨ಉ ೩ ೨ ೩ ೨ ೩ ೧ ೨
**ಅಭೀ ಷತಸ್ತದಾ ಭರೇನ್ದ್ರ ಜ್ಯಾಯ ೯ ಕನೀಯಸಃ ।**

೩ ೨ ೩ ೧ ೨ ೩ ೧ ೨ ೩ ೧ ೨ ೩ ೧ ೨
**ಪುರೂವಸುರ್ಹಿ ಮಘವನ್ ಬಭೂವಿಥ ಭರೇಭರೇ ಚ ಹವ್ಯಃ ॥**

೩ ೨ ೩ ೨ ೩ ೧ ೨೦ ೧ ೨೦ ೧ ೨೦ ೩
ಅಭಿ - ಸತಃ - ತತ್ - ಆ - ಭರ । ಇನ್ದ್ರ - ಜ್ಯಾಯಃ - ಕನೀಯಸಃ ॥ ಪುರೂ

೧ ೨ ೩ ೧ ೨೦ ೩ ೧ ೨ ೧ ೨೦ ೧ ೨೦
ವಸುಃ - ಪುರು - ವಸುಃ - ಹಿ - ಮಘವನ್ - ಬಭೂವಿಥ । ಭರೇಭರೇ - ಭರೇ

೩ ೧ ೨೦
- ಭರೇ - ಚ - ಹವ್ಯಃ ॥ ೭.೩೦೯ ॥

ಸಮುದ್ರಪ್ಯೆಯಮೇಧಮ್ । ಪ್ರಿಯಮೇಧಾ ಬೃಹತೀನ್ದ್ರಃ ॥

೫೦ ೦ ೧ ೦ ೨೧೦
೩೦೯.೧. ಅಭೀಷತಸ್ತದಾಹಾಲು ॥ ಭರಾ । ಇನ್ದ್ರಜ್ಯಾಯ ೨ ಕನೀ

೨ ೦ ೧ ೨ ೧೦
ಯಾऽ೨೩ಸಾಃ । ಪುರೂವಸುರ್ಹಿಮಘವನ್ ಬಭೂವಾऽ

೨ ೧ ೨ ೧ ೨ ೧
೨೩ಇಥಾ ॥ ಭರಾಇಭಾऽ೨೩ರೇ ॥ ಚಹವ್ಯಃ । ಇಡಾऽ೨

೨ ೧
೩ಭಾऽ೩೪೩ । ಓऽ೨೩೪೫ಇ ॥ ಡಾ ॥

*ದೀ - ೬ । ಪ - ೯ । ಮಾ - ೬ । ಘೂ । ೩೦ । ೫೨೨ ॥*

ಹೇ **ಜ್ಯಾಯಃ!** ಜ್ಯಾಯನ್ನಿನ್ದ್ರ ಆಮನ್ತ್ರಿತಂ ಪೂರ್ವಮವಿದ್ಯಮಾನ ವದಿತೀನ್ದ್ರ ಪದಸ್ಯ ವಿದ್ಯಮಾನವದ್ಭಾವಾತ್ ಜ್ಯಾಯ ಇತ್ಯಸ್ಯ ಸರ್ವಾನುದಾತ್ತತ್ವಾ ಭಾವಃ । ನಕಾರಸ್ಯ ರುತ್ವಂ ವ್ಯತ್ಯಯೇನ ನುಮಭಾವೋ ವಾ । **ಕನೀಯಸಃ** ಸತೋ ಮಮ **ತತ್** ಪ್ರಸಿದ್ಧಮ್ ಧನಮ್ ॥ **ಅಭ್ಯಾಭರ** ಅಭ್ಯಾಹರ ಹೇ **ಮಘ ವನ್!** ಧನವನ್ನಿನ್ದ್ರ **ಪುರೂವಸುಃ** ಬಹುಭಿರ್ವನನೀಯೋ **ಬಭೂವಿಥ ಅಸಿ** । ಭರೇಭರೇ ಸಂಗ್ರಾಮೇ **ಚ ಹವ್ಯೋ** ಹೋತವ್ಯಂ ಚ ಬಭೂವಿಥ ॥ ಮಘವನ್ ಬಭೂಪಿಥ ಇತಿ ಛಂದೋಗಾಃ । ಮಘವತ್ಸನಾದಸಿ ಇತಿ ಬಹ್ವೃಚಾಃ ॥

**ಜ್ಯಾಯಃ ಇನ್ದ್ರಃ** ಎಲ್ಲರಿಗಿಂತ ಜ್ಯೇಷ್ಠನೂ ಶ್ರೇಷ್ಠನೂ ಆದ ಇನ್ದ್ರ ಭಗವಂತನೇ, **ಕನೀಯಸೇ ಮಮ** ನಿನಗಿಂತ ಬಹುಕನಿಷ್ಠನೂ ಅಲ್ಪನೂ ಆದ ನನಗೆ, **ಇಷತಃ ತತ್** ಇಷ್ಟಪಡುವ ಬೇಡುವ ಆ ಪ್ರಸಿದ್ಧವಾದ ಧನವನ್ನು,

ಅಭ್ಯಾಭರ ಒದಗಿಸಿಕೊಡು, ಮಘವನ್ ಧನವಂತನಾದ ಇನ್ದ್ರನೇ, ಪುರೂ ವಸುಃ ಬಭೂವಿಥ ಎಲ್ಲರೂ ನಿನ್ನನ್ನು, ಒಂದಲ್ಲೊಂದು ಕಾಮನೆಗಳನ್ನು ಪೂರೈಸಿಕೊಳ್ಳಲು ಯಾಚಿಸುವರು, ಭರೇಭರೇ ಪ್ರತಿ ಯುದ್ಧ ಪ್ರಸಂಗದಲ್ಲೂ ಕ್ಷೇಮಾಪೇಕ್ಷೆಯಿಂದ ಪೂಜ್ಯನಾದ ನಿನಗೆ, ಹವ್ಯಃ ಹವಿಸ್ಸನ್ನರ್ಪಿಸುವರು.

ಎಲ್ಲರಿಗಿಂತ ಹಿರಿಯನೂ ಶ್ರೇಷ್ಠನೂ ಆದ ಇನ್ದ್ರಭಗವಂತನೇ! ನಿನಗಿಂತ ಬಹು ಕನಿಷ್ಠನೂ ಅಲ್ಪನೂ ಆದ ನನಗೆ ಎಲ್ಲರೂ ಅಪೇಕ್ಷಿಸುವ ಆ ಪ್ರಶಸ್ತ ಧನವನ್ನು ಅನುಗ್ರಹಿಸು. ಬಹು ಐಶ್ವರ್ಯಶಾಲಿಯಾದ ನಿನ್ನನ್ನು ಎಲ್ಲರೂ ಅವರವರ ಇಷ್ಟಾರ್ಥಗಳನ್ನು ಅನುಗ್ರಹಿಸಬೇಕೆಂದು ಬೇಡುತ್ತಾರೆ ಮತ್ತು ಪ್ರತಿಯೊಂದು ಕಷ್ಟಪ್ರಸಂಗದಲ್ಲೂ ತಮ್ಮ ಕ್ಷೇಮಸ್ಥೈರ್ಯಗಳನ್ನು ಬಯಸಿ ನಿನಗೆ ಆಹ್ವಾನವನ್ನಿತ್ತು ಹವಿಸ್ಸನ್ನರ್ಪಿಸುತ್ತಾರೆ.

ಹಿರಿಯನೆನಿಸಿದ ಮಹೇಂದ್ರನೆ! ತುಂಬ ಕೀಳೆನಿಸಿದ
ನನಗೆ ಸಕಲೇಪ್ಸಿತಧನಂಗಳಂ ನೀಡು ನಲವಿಂ ।
ಸಿರಿವಂತನಪ್ಪ ನಿನ್ನನ್ನೆಲ್ಲರಿಷ್ಟಕೆಂದು
ಬೇಳ್ಪರಾಪದದೆ ಹವಿಯಿತ್ತು ನೆಮ್ಮದಿಯನೆಳಸಿ ॥

## ಋಕ್ - ೩೧೦

ವಸಿಷ್ಠೋ ಮೈತ್ರಾವರುಣಿಃ । ಬೃಹತೀನ್ದ್ರಃ ॥

೧ ೨ ೩ ೧ ೨ ೩ ೨ ೩ ೧ ೨ ೩ ೧ ೨ರ
ಯದಿನ್ದ್ರ ಯಾವತಸ್ತ್ವಮೇತಾವದಹಮೀಶೀಯ ।

೩ ೨ ೩ ೧ ೨ ೩ ೧ ೨ ೩ ೧ ೨
ಸ್ತೋತಾರಮಿದ್ದಧಿಷೇ ರದಾವಸೋ ನ ಪಾಪತ್ವಾಯ ರಂಸಿಷಮ್ ॥

೨ ೩ ೧ ೨ರ ೩ ೧ ೨ ೩ ೨ ೧ ೨ರ ೩
ಯತ್ - ಇನ್ದ್ರ - ಯಾವತಃ - ತ್ವಂ । ಏತಾವತ್ - ಅಹಂ - ಈಶೀಯ ॥ ಸ್ತೋ

೧ ೨ ೩ ೨ ೩ ೧ ೨
ತಾರಂ - ಇತ್ - ದಧಿಷೇ - ರದಾವಸೋ - ರದ - ವಸೋ । ನ - ಪಾಪತ್ವಾಯ

೩
- ರꣳಸಿಷಮ್ ॥ ೮.೩೧೦ ॥

ವೈರೂಪೇ ದ್ವೇ । ದ್ವಯೋರಿನ್ದ್ರೋ ಬೃಹತೀನ್ದ್ರಃ ॥

೨ ೧ ೪೧ ೫ ೨ರ ೧ರ ೧
೩೧೦.೧. ಯದಿನ್ದ್ರಾಽ೨೩ಯಾವತಸ್ತ್ವಾಮ್ ॥ ಏತಾವದಹಮೀ

೧ ೧ ೧ ೨ ೧ ೨ರ ೧
ಶೀಯಾ । ಸ್ತೋತಾರಾಽ೨೩ಮೀತ್ । ದಾಧಿಷೇ । ರದಾ

೨ — ೧ರ ೫ ೧ ೨ ^
ವಾಽ೧ಸಾಽ೨ಉ ॥ ನಪಾಪಾಽ೨೩೪ತ್ವಾ ॥ ಯಾರೌವಾ

೩ ೫ ೪ ॥ ೫
ಓಽ೨೩೪ವಾ ॥ ಸಾಽ೫ಇಷೋಽ೬ಹಾಇ ॥

ದೀ - ೯ । ಪ - ೮ । ಮಾ - ೬ । ದೂ । ೩೧ । ೫೨೩ ॥

೫ ೩ ೨ರ ೩೪೫ ೧ ೨ ೧ ೨
೩೧೦.೨. ಯದಿನ್ದ್ರಯಾವತಸ್ತ್ವಾಮ್ ॥ ಆಇತಾಽ೩ । ವಾದಾಽ೩

೪ ೫ ೧ ೨ — ೧ ೨ರ ೧
ಹಾಮೀ । ಶಾಯಾಽ೩ಽ೧೨ । ಸ್ತೋತಾರಾಮೀಽ೨೩ತ್ ।

೪ ೫ರ ೧ ೨ — ೧ ೨ರ ೧
ದಧಿಷೇರದಾ । ವಾಸಾಽ೩ಽ೧೨ಉ ॥ ನಾಪಾಪಾತ್ವಾಽ೨

೧ ೨^ ೩ ೫ ೪ ॥ ೫
೩ ॥ ಯಾರೌವಾಓಽ೨೩೪ವಾ ॥ ಸಾಽ೫ಇಷೋಽ೬ಹಾ

ಹೇ **ಇನ್ದ್ರ! ಯದ್** ಯತೋ **ಯಾವತೋ** ಧನಸ್ಯ **ಈಶಿಷೇ ಏತಾವತ್** ಷಷ್ಠ್ಯಾಲುಕ್ ಏತಾವತೋ ಧನಸ್ಯ **ಅಹಮೀಶೀಯ** ಈಶ್ವರೋ ಭವೇಯಮ್ । ಹೇ **ರದಾವಸೋ!** ರದತಿ ದದಾತಿ ವಸೂನೀತಿ ರದಾವಸುಃ ತಾದೃಶ ಹೇ **ಇನ್ದ್ರ!** ತತೋಽಹಮಸ್ಮದೀಯಂ **ಸ್ತೋತಾರಮ್ ಇತ್ ದಧಿಷೇ** ಧನಪ್ರದಾನೇನ ಧಾರಯೇಯಮೇವ । **ಪಾಪತ್ವಾಯ** ಕ್ಷೀಣತ್ವಾಯ **ನರಂ ಸಿಷಂ** ನ ದದ್ಯಾಮ್ ॥ ಸ್ತೋತಾರಮಿದ್ದಧಿಷೇರದಾವಸೋನಪಾಪತ್ವಾಯ ರಂಸಿಷಮ್ - ಇತಿ ಛನ್ದೋಗಾಃ । ದಧಿಷೇಯರದಾವಸೋನಪಾಪತ್ವಾಯ ರಾಸೀಯ- ಇತಿ ಬಹ್ವೃಚಾಃ ॥

**ರದಾವಸೋ ಇನ್ದ್ರ:** ರದ್ಯತೇ ಸುವರ್ಣಾದಿಧನಂ ಯಸ್ಮಾತ್ ಸ ರದಃ । ವಸೂನಾಂ ಧನಾನಾಂ ರದಃ ಖನಿಃ । ಸುವರ್ಣಾದಿ ದಾನ ಸಂಪನ್ನವಾದ ಧನವಂತನಾದ ಇನ್ದ್ರ ಭಗವಂತನೇ, **ಯತ್** ಯಾವ ರೀತಿಯಾಗಿ, **ಯಾವತಃ** ಯಾವ ಯಾವ ಧನಕ್ಕೆಲ್ಲಾ, ತ್ವಂ ನೀನು ಒಡೆಯನಾಗಿದ್ದೀಯೋ, **ಏತಾವತ್** ಅದೇ ಬಗೆಯಲ್ಲಿ ಅದೇ ಧನಕ್ಕೆಲ್ಲಾ, **ಅಹಂ** ನಾನೇ, **ಈಶೀಯ** - ಸ್ವಾಮಿ ಯಾಗಿದ್ದರೆ, **ಸ್ತೋತಾರಮಿತ್ ದಧಿಷೇ** ಸ್ತೋತೃಗಳಿಗೆ ಮಾತ್ರವೇ, **ದಿಧಿಷೇಯ** ಧನವನ್ನನುಗ್ರಹಿಸಿ ಪೋಷಣೆ ಮಾಡುತ್ತಿದ್ದೆ, **ಪಾಪತ್ವಾಯ** ಪಾಪ ಕರ್ಮನಿರತರಾದವರಿಗೆ, **ನರಂಸಿಷಮ್** ಖಂಡಿತ ಕೊಡುತ್ತಿರಲಿಲ್ಲ, ಸಿಗುವಂತೆ ಮಾಡುತ್ತಿರಲಿಲ್ಲ.

ಸುವರ್ಣಾದಿ ದಾನಯೋಗ್ಯ ಸಂಪತ್ತಿನ ಒಡೆಯನಾದ ಇನ್ದ್ರ ಭಗವಂತನೇ ನಿನ್ನ ಒಡೆತನದ ಆ ಧನಕ್ಕೆಲ್ಲಾ ನಾನೇ ಒಡೆಯನಾಗಿದ್ದಿದ್ದರೆ ಸ್ತೋತೃಗಳಿಗೆ ಮಾತ್ರ ಆ ಧನವನ್ನು ಅನುಗ್ರಹಿಸಿ ಅವರ ಪೋಷಣೆ ಮಾಡುತ್ತಿದ್ದೆ. ಪಾಪಕರ್ಮಿಗಳಿಗೂ ಪಾಪಿಷ್ಠರಿಗೂ ಆ ಧನವನ್ನು ದಾನ ಮಾಡುತ್ತಿರಲಿಲ್ಲ.

ಕನಕಾದಿದಾನಾರ್ಹಸಂಪದೀಶನೆ! ಇಂದ್ರನೆ!
ನಿನ್ನ ಸಿರಿಯೆನಗಿರ್ದೊಡಾಂ ಸ್ತೋತೃಗಳಿಗೆಂದದಂ ।
ನೀಡುತಿರ್ದೆಂ ಪೊರೆಸಿ; ಪಾಪಿಗಳ್ಗದನೀಯದೆ
ಅಂತೆ ನೀನೆನಗಮೀವುದು ಕೂರ್ಕೆಯಿಂದೆ ಸಿರಿಯಂ ॥

## ಋಕ್ - ೩೧೧

ನೃಮೇಧ ಆಂಗಿರಸಃ । ಬೃಹತೀನ್ದ್ರಃ ॥

೧ ೨ ೩ ೧ ೨ ೩ ೧ -೨೦ ೩ ೧ ೨
ತ್ವಮಿನ್ದ್ರ ಪ್ರತೂರ್ತಿಷ್ವಭಿ ವಿಶ್ವಾ ಅಸಿ ಸ್ಪೃಧಃ ।
೩ ೧ ೨೩೧ ೨೩ ೧ ೨೩೧ ೨ ೩ ೨
ಅಶಸ್ತಿಹಾ ಜನಿತಾ ವೃತ್ರತೂರಸಿ ತ್ವಂ ತೂರ್ಯ ತರುಷ್ಯತಃ ॥

೨ ೩ ೧ ೨೦ ೩ ೨ ೧ ೨೦ ೩ ೧
ತ್ವಂ - ಇನ್ದ್ರ - ಪ್ರತೂರ್ತಿಷು - ಪ್ರ - ತೂರ್ತಿಷು । ಅಭಿ - ವಿಶ್ವಾಃ - ಅಸಿ - ಸ್ಪೃ
೨೦ ೩ ೨ ೩ ೨ ೩ ೨ ೩ ೨ ೩ ೨ ೩
ಧಃ ॥ ಅಶಸ್ತಿಹಾ - ಅಶಸ್ತಿ - ಹಾ - ಜನಿತಾ - ವೃತ್ರತೂಃ - ವೃತ್ರ - ತೂಃ - ಅ
೨ ೩ ೨
ಸಿ । ತ್ವಂ - ತೂರ್ಯ - ತರುಷ್ಯತಃ ॥ ೯.೩೧೧ ॥

ವೈಶ್ವದೇವಮ್ । ವಿಶ್ವೇದೇವಾ ಬೃಹತೀನ್ದ್ರಃ ॥

೪ ೫ ೪ ೫ ೦ ೪ ೫ ೧ ೨ ೦
೩೧೧.೧. ತ್ವಮಿನ್ದ್ರೋ೩ಹಾಇ । ಪ್ರತೂರ್ತಿಷ್ವೋ೩ವಾ ॥ ಆಭಿವಿಶ್ವಾಃ ।
೧ ೨ __ ೧ ೨ ೦ ೦ ೧
ಅಸಾಇಸ್ಪಾ೨೧ರ್ದ್ಧಾ೨೨: । ಆಶಸ್ತಿಹಾಜನಿತಾವೃ । ತ್ರಾ

೨ — ೧ ೨ ^ ೩ ೨
ತೂ೨೧ರಾಸಾ೨೨ಇ ॥ ತ್ವಾನ್ತೂ೨೧ರ್ಯಾ೨೨ ॥ ತರುಷ್ಯ

೧ ೨ ೪ ೫ ೪
ತಾ । ಔ೨೩ಹೋವಾ । ಹೋ೨೫ಇ ॥ ಡಾ ॥

*ದೀ - ೪ / ಪ - ೧೧ / ಮಾ - ೬ / ತೂ / ೩೩ ॥ ೫೨೫ ॥*

ಹೇ ಇನ್ದ್ರ! ತ್ವಂ **ಪ್ರತೂರ್ತಿಷು** ಸಂಗ್ರಾಮೇಷು **ವಿಶ್ವಾಃ** ಸರ್ವಾಃ **ಸ್ಪೃಧೋ** ಯುದ್ಧಕಾರಿಣೋಃ ಶತ್ರುಸೇನಾಃ **ಅಭ್ಯಸಿ** ಅಭಿಭವಸಿ ಕಿಂಚ ಹೇ **ತೂರ್ಯ!** ಶತ್ರೂಣಾಂ ಬಾಧಕ ಇನ್ದ್ರ! ತ್ವಮ್ **ಅಶಸ್ತಿಹಾ** ದೈವೀನಾಮಶಸ್ತೀನಾಂ ಹನ್ತಾಸಿ । **ಜನಿತಾ** ಅಸುರೇಭ್ಯಃ ಅಶಸ್ತೀನಾಂ ಜನಯಿತಾ ಚಾಸಿ । **ವೃತ್ರತೂಃ** ಸರ್ವಸ್ಯ ಶತ್ರುವರ್ಗಸ್ಯ ಹಿಂಸಿತಾ ಚಾಸಿ । ತರುಷ್ಯತಃ ಬಾಧಕಾಂಶ್ಚ ಬಾಧಮಾನೋಽಸಿ ॥

ಇನ್ದ್ರ ಇನ್ದ್ರ ಭಗವಂತನೇ, ತ್ವಂ ನೀನು, ತರುಷ್ಯತಃ ತರುಷ್ಯತಿರ್ವಧಕರ್ಮಾ ತಸ್ಯೇದಂ ರೂಪಮ್, ತಥಾಹಿ ಮನುಷ್ಯತಿರ್ಹನ್ತಿ ಕರ್ಮಾ ಇತ್ಯಾದಿ ತದಷ್ಯತಿರಪ್ಯೇವಂ ಕರ್ಮೇತಿ ನೈರುಕ್ತಂ ದ್ರಷ್ಟವ್ಯಮ್ - ೫.೨. ॥ ವಿವರಣಕಾರಸ್ತು ತರುಷತಿರ್ವಧಕರ್ಮಾ ತತ್ಸಾಪಿತುಮಿಚ್ಛನ್ತಿ ತಾನ್ ತರುಷ್ಯತಃ ಯೇ ತ್ವಾಂ ಹನ್ತುಮಿಚ್ಛನ್ತಿ ತಾನ್ ಪ್ರತಿಹಿಂಸೇತ್ಯರ್ಥಃ ಇತಿ ವ್ಯಾಚಷ್ಟೇ ॥ ನಿನ್ನ ಭಕ್ತರನ್ನು ಹಿಂಸಿಸುವವರಿಗೆ ಹಿಂಸಕನಾಗಿರುತ್ತೀಯೆ, ಪ್ರತೂರ್ತಿಷು ಯುದ್ಧ ಗಳಲ್ಲಿ, ವಿಶ್ವಾಃ ಸ್ಪೃಧಾಃ ಪ್ರತಿಭಟಿಸುವ ಸಮಸ್ತ ಶತ್ರುಸೇನೆಗಳನ್ನೂ, ಅಭ್ಯಸಿ ತಿರಸ್ಕರಿಸಿ ಸೋಲಿಸುವೆ, ತೂರ್ಯ ತ್ವಂ ಶತ್ರುಸಂಹಾರಕನಾದ ಇನ್ದ್ರನೇ ನೀನು, ಅಶಸ್ತಿಹಾ ಕೇಡನ್ನು ಬಯಸುವ ಶತ್ರುಗಳ ಸಂಹಾರಕನಾಗಿಯೂ ದೈವೀ ಆಪತ್ತುಗಳ ನಿವಾರಕನಾಗಿಯೂ, ಜನಿತಾ ಶತ್ರುಗಳಿಗೆ ಆಪತ್ತನ್ನುಂಟುಮಾಡು ವವನೂ, ವೃತ್ರತೂಃ ಸಮಸ್ತ ಶತ್ರುವರ್ಗದ ಹಿಂಸಕನೂ, ಅಸಿ ಆಗಿದ್ದೀಯೆ.

ಇನ್ದ್ರ ಭಗವಂತನೇ ನಿನ್ನ ಭಕ್ತರನ್ನು ಹಿಂಸಿಸುವವರ ಹಿಂಸಕನೂ ಯುದ್ಧದಲ್ಲಿ ಪ್ರತಿಭಟಿಸುವ ಸಮಸ್ತ ವರ್ಗದ ಶತ್ರುಗಳ ನಾಶಕನೂ ಕೇಡನ್ನು ಬಯಸುವವರನ್ನೆಲ್ಲಾ ಧ್ವಂಸ ಮಾಡುವವನೂ ಆಗಿದ್ದೀಯೆ.

*ಇಂದ್ರನೆ! ಸುಧರ್ಮಾಧಿಪತಿಯೆ! ನಿನಗೊಲಿದ ನತರಂ*
*ಹಿಂಸಿಸುವ ನೀಚರಂ, ರಣದೆ ಸೆಣಸುವ ರಿಪುಗಳಂ*
*ಸದೆವವಂ ನೀನೆ; ಕೆಡುಕಂ ತರ್ಪರಂ ಶಾಸಿಪಂ,*
*ನೀಚನಾಶಕರನುಂ ನೀನೆ; ನೀನಲ್ತೆ! ದೇವ! ॥*

## ಋಕ್ - ೩೧೨

ನೋಧಾ ಗೌತಮಃ । ಬೃಹತೀನ್ದ್ರಃ ॥

೧ ೨೩೧ ೨೩ ೧ ೨ ೩೧೨
ಪ್ರಯೋ ರಿರಿಕ್ಷ ಓಜಸಾ ದಿವಃ ಸದೋಭ್ಯಸ್ಪರಿ ।

೧ ೨ ೩೧೨ ೩ ೧ ೨ ೩ ೨ ೩೧೨
ನ ತ್ವಾ ವಿವ್ಯಾ ಚ ರಜ ಇನ್ದ್ರ ಪಾರ್ಥಿವಮತಿ ವಿಶ್ವಂ ವವಕ್ಷಿಥ ॥

*ಸ್ವ - ೧೦ । ಉ - ೩ । ಧಾ - ೭೭ । ವೇ ॥*

೨ ೩ ೨ ೧೨ ೩೨ ೧೨ ೧೨ ೩
ಪ್ರ - ಯಃ - ರಿರಿಕ್ಷೇ - ಓಜಸಾ । ದಿವಃ - ಸದೋಭ್ಯಃ - ಪರಿ ॥ ನ - ತ್ವಾ - ವಿವ್ಯಾ

೧೨ ೩ ೧ ೨ ೧೨ ೧೨ .೩
ಚ - ರಜಃ - ಇನ್ದ್ರ - ಪಾರ್ಥಿವಮ್ ॥ ಅತಿ - ವಿಶ್ವಂ - ವವಕ್ಷಿಥ ॥ *೧೦.೩೧೨* ॥

*ಋ - ೫೦ । ಅ - ೧೪ । ಪ - ೧೮೨ । ಭಾ । ದ - ೨ ॥*

*ಇತಿ ದ್ವಿತೀಯಾ ದಶತಿಃ ॥ ೨ ॥ ಅಷ್ಟಮಃ ಖಣ್ಡಃ ॥ ೮ ॥*

ಇತಿ ಬೃಹತೀ ಸಮಾಪ್ತಾಃ ॥

ಪುರೀಷಮ್ । ಅಥರ್ವಾ ಬೃಹತೀನ್ದ್ರಃ ॥

೩ ೧ ೧ ೩ ೨ ೧ ೨೦ ೧
೩೧೨.೧. ಪ್ರಯೋರಿರಿಕ್ಷಓಜಸಾ೨೬ಏ ॥ ದಿವಸ್ಸದೋ೭೨ಭ್ಯಸ್ಪರಿ ।

ಅ ೨೦ ನ ೨ ೧ ೨೦ ನ
ನತ್ವಾವಿವ್ಯಾ । ಔಹೋ೭೩ವಾ । ಚಾ । ರಜಃ । ಔಹೋ೭೩

೨ ೧೦ ೨
ವಾಇ । ದ್ರಪಾರ್ಥಿವಾಮ್ ॥ ಅತಿವಾ೨೩ಇಶ್ವಾಮ್ ॥

೧ ೨ ೧ ೨
ವಾವಕ್ಷಿಥ । ಇಡಾ೨೩ಭಾ೩೪೩ । ಓ೨೩೪೫ಇ ॥

ಡಾ ॥ *ದೀ - ೬ । ಪ - ೧೩ । ಮಾ - ೮ । ಗೈ । ೩೪ । ೫೨೬ ॥*

*ಏಕಾದಶ ಅಷ್ಟಮಃ ಖಣ್ಡಃ ॥ ೮ ॥ ದಶತಿಃ ॥ ೨ ॥ ಇತಿ ಬಾರ್ಹತಮೈನ್ದ್ರಮ್ ॥*

ಹೇ **ಇನ್ದ್ರ!** ಯಸ್ತ್ವಂ ದಿವೋ ದ್ಯುಲೋಕಸ್ಯ **ಸದೋಭ್ಯಃ** ಸ್ಥಾನೇಭ್ಯಃ ಪರಿ ಪರ್ಯನ್ತೇಭ್ಯಃ **ಓಜಸಾ** ಬಲೇನೈವ **ಪ್ರರಿರಿಕ್ಷೇ** ಪ್ರಕರ್ಷೇಣಾತಿರಿಕ್ತೋ ಭವಸಿ ರಿಚೇರ್ಲಟಿ ಬಹುಲನ್ ಛಂದಸೀತಿ ಶ್ಲುಃ । ಪ್ರತ್ಯಯ ಸ್ವರಃ । ಕಿಂಚ । ಹೇ ಇನ್ದ್ರ! **ಪಾರ್ಥಿವಮ್** ಪೃಥಿವ್ಯಾ ಭವಂ **ರಜೋ** ಲೋಕಃ **ತ್ವಾ** ತ್ವಾಂ ಮಹತಾ ಸ್ವಶರೀರೇಣ **ನ ವಿವ್ಯಾ ಚ** ನ ವ್ಯಾಪ್ನೋತಿ ದ್ಯಾವಾಪೃಥಿವೀಭ್ಯಾಮಪಿ ಸ್ವತಃ ಸತ್ವಂಬಲೇನ ಸಮರ್ಥೋ೭ಸೀತ್ಯರ್ಥಃ । ಏವಂ ಭೂತಃ ಸನ್ ತ್ವಮ್ ಅಸ್ಮಾನ್ **ವಿಶ್ವಂ ಅತಿ** ಅತಿಕ್ರಮ್ಯ **ವವಕ್ಷಿಥ** । ವೋಢುಮಿಚ್ಛ ವಹೇಃ ಸನ್ನನ್ತಸ್ಯ ಛಾಂದಸೇರ್ಲಿಟಿರೂಪಂ ಮಂತ್ರ ತ್ವಾ ದಾಮಭಾವಃ ॥

ಇನ್ದ್ರ ಇನ್ದ್ರಭಗವಂತನೇ!, ದಿವಃ ಸದೋಭ್ಯಃ ಜಸಾ ದ್ಯುಲೋಕ ಸ್ಥಾನದಲ್ಲಿ ಆತ್ಮಬಲದಿಂದಲೇ, ಪ್ರರಿರಿಕ್ಷೇ ಎಲ್ಲರನ್ನೂ ಮೀರಿಸಿ ಶ್ರೇಷ್ಠನಾಗಿದ್ದೀಯೆ, ಪಾರ್ಥಿವಂ ರಜಃ ಈ ಭೂಲೋಕವು ತನ್ನ ಅಗಾಧವಾದ ಆಕಾರ ವಿಸ್ತೀರ್ಣದಿಂದಲೂ ಸಹ, ತ್ವಾ ನಿನ್ನನ್ನು, ನ ವಿವ್ಯಾ ಚ ವ್ಯಾಪಿಸಲು ಒಳಗೊಳ್ಳಲು ಸಮರ್ಥವಾಗಲಾರದು, ಇಂತಹ ನೀನು, ವಿಶ್ವಮ್ ಅತಿ ವವಕ್ಷಿಥ ವಿಶ್ವವನ್ನು ಅತಿಕ್ರಮಿಸಿಯೂ ಅತಿ ಶ್ರೇಷ್ಠನಾಗಿಯೂ ನಮ್ಮನ್ನೂ ಸಹ ರಕ್ಷಿಸು, ಅನುಗ್ರಹಿಸು.

ಇನ್ದ್ರ ಭಗವಂತನೇ ದ್ಯುಲೋಕದಂತಹ ಉನ್ನತ ಸ್ಥಾನದಲ್ಲಿ ನಿನ್ನ ಸ್ವಶಕ್ತಿಯಿಂದಲೇ ಎಲ್ಲರನ್ನೂ ಮೀರಿಸಿ ಶ್ರೇಷ್ಠನಾಗಿದ್ದೀಯೆ. ಈ ಪಂಚೇಂದ್ರಿಯಗಳಿಗೆ ಅನುಭವಗಮ್ಯವಾಗಿರುವ ಭೂಲೋಕವು ತನ್ನ ವಿಸ್ತೀರ್ಣದ ಅಗಾಧತೆಯಿಂದಲೂ ಸಹ ನಿನ್ನನ್ನು ಒಳಗೊಳ್ಳಲು ವ್ಯಾಪಿಸಲು ಸಮರ್ಥವಾಗಿಲ್ಲ. ಇಂತಹ ನೀನು ವಿಶ್ವವನ್ನು ಅತಿಕ್ರಮಿಸಿಯೂ ಅತಿ ಶ್ರೇಷ್ಠನಾಗಿಯೂ ಸಹ ನಮ್ಮನ್ನು ರಕ್ಷಿಸು ಅನುಗ್ರಹಿಸು.

*ಉನ್ನತದ್ಯುಸ್ಥಾನವಾಸಿ! ನೀಂ ನಿನ್ನ ಬಲದಿಂ*
*ಸರ್ವೋನ್ನತಂ; ಕೇವಲೇಂದ್ರಿಯಗ್ರಾಹ್ಯಮಿಳೆಯು ।*
*ತನ್ನ ವಿಸ್ತಾರದಿಂ ನಿನ್ನನೊಳಗೊಳಲಾರದಯ್*
*ಇಂತಪ್ಪ ವಿಶ್ವಕ್ಕತೀತ! ನೀಂ ಪೊರೆವುದೆಮ್ಮಂ ॥*

## ಋಕ್ - ೩೧೩

ವಸಿಷ್ಠೋ ಮೈತ್ರಾವರುಣಿಃ । ತ್ರಿಷ್ಟುಬಿನ್ದ್ರಃ ॥

೧ ೨ ೩ ೧ ೨೦ ೩ ೨ ೩೪ ೨೦ ೩ ೧ ೨ ೩ ೧ ೨
ಅಸಾವಿ ದೇವಂ ಗೋ ಋಜೀಕಮನ್ಧೋ ನ್ಯಸ್ಮಿನ್ನಿನ್ದ್ರೋ ಜನುಷೇ

ಮುವೋ ಚ ।

೧ ೨ ೩ ೧ ೨೦ ೩
ಬೋಧಾಮಸಿ ತ್ವಾ ಹರ್ಯಶ್ವ ಯಜ್ಞೈರ್ಬೋಧಾ ನಃ

೨ ೩ ೧ ೨೩ ೧ ೨
ಸ್ತೋಮಮನ್ಧಸೋ ಮದೇಷು ॥ ೧.೩೧೩ ॥

೧ ೨೦ ೩ ೧ ೨೦ ೩ ೧ ೨೦ ೩
ಅಸಾವಿ – ದೇವಂ – ಗೋಋಜೀಕಂ – ಗೋ – ಋಜೀಕಂ – ಅನ್ಧಃ । ನಿ – ಅಸ್ಮಿ

೧ ೨೦ ೩ ೧ ೨ ೩ ೧ ೨೦ ೩
ನ್ – ಇನ್ದ್ರಃ – ಜನುಷಾ – ಈಂ – ಉವೋಚ ॥ ಬೋಧಾಮಸಿ – ತ್ವಾ – ಹ

೨ ೧ ೨೦ ೩ ೧ ೨೦ ೧ ೨೦
ರ್ಯಶ್ವ – ಹರಿ – ಅಶ್ವ – ಯಜ್ಞೈಃ । ಬೋಧ – ನಃ – ಸ್ತೋಮಂ – ಅನ್ಧಸಃ –

೧ ೨೦
ಮದೇಷು ॥ ೧.೩೧೩ ॥

ಪ್ರಾಕರ್ಷಮ್ । ಪ್ರಕರ್ಷಸ್ತ್ರಿಷ್ಟುಬಿನ್ದ್ರಃ ॥

೨ ೦ ೦ ೨^ ೩ ೫ ೧ ೦
೩೧೩.೧. ಅಸಾಹೋವಾಽ೩ಹಾಇ । ವೀಽ೨೩ಳದೇ । ವಾಜ್ಗೋ

೨ ೩ ೪ ೫ ೨೦ ೦ ೨^ ೩
ಋ । ಜೀಕಮನ್ಧಾಃ ॥ ನ್ಯಾಹೋವಾಽ೩ಹಾ । ಸ್ಮೀಽ೨೩ಳ

೫ ೧ ೨^ ೩ ೪ ೫ ೨೦ ೦ ೦
ನೀ । ದ್ರೋಜನು । ಷೇಮುವೋಚಾ ॥ ಬೋಧಾಹೋ

೨^ ೩ ೫ ೧ ೨ ೩ ೪ ೫
ವಾಽ೩ಹಾಇ । ಮಾಽ೨೩ಳಸೀ । ತ್ವಾಹರಿ । ಅಶ್ವಯಜ್ಞೈಃ ॥

೨೦ ೦ ೦ ೨^ ೩ ೫ ೨ ೧
ಬೋಧಾಹೋವಾಽ೩ಹಾಇ । ನಾಽ೨೩ಳಸ್ತೋ । ಮಮ

೨ ೨ ೪ ॥
ನ್ಧ ॥ ಸೋ೯ಽ೩ಳ೩ । ಮಾಽ೩ದಾಽ೫ಇಷೂಽ೬೫೬ ॥

*ದೀ - ೧೧ । ಪ - ೧೭ । ಮಾ - ೭ । ಶೇ । ೩೫ । ೫೨೭ ॥*

ನಿಹವಃ ನಿಹವಮ್ ವಾ । ವಸಿಷ್ಠಸ್ತ್ರಿಷ್ಟುಬಿನ್ದ್ರಃ ॥

೧ ೨ ೧ ೨^ ೩೦ ೨^ ೩ ೫ ೨
೩೧೩.೨. ಆಇಹೀ೯ಽ೩ । ಆಇಹೀ೯ । ಏಹಿಯಾ । ಓಽ೨೩ಳವಾ । ಹಾ

೦ ೦ ೦ ೦ ೧ ೨ ೧
ಇ । ಅಸಾವಿದೇವಙ್ಗೋ೯ಋಜೀಕಽ೩ಮಾನ್ಧಾಽ೩ಃ । ಆ

೨ ೩ ೨^ ೩ ೫ ೨ ೦
ನ್ಧಾಽ೩ಃ । ಅನ್ಧಾ । ಓಽ೨೩ಳವಾ । ಹಾಇ ॥ ನ್ಯಸ್ಮಿನ್ನಿನ್ದ್ರೋ೯

೦ ೧ ೨ ೧ ೨^ ೩೦ ೨^ ೩
ಜನುಷೇಮುಽ೩ವೋ೯ಚಾಽ೩ । ವೋ೯ಚಾ । ವೋ೯ಚಾ । ಓಽ

೫ ೨ ೦ ೦ ೦
೨೩ಳವಾ । ಹಾಇ ॥ ಬೋ೯ಧಾಮಸಿತ್ವಾಹರ್ಯಶ್ವಽ೩

೧ ೨ ೧ ೨^ ೩ ೨^ ೩ ೫ ೨
ಯಾಜ್ಞೈಽ೩ಃ । ಯಾಜ್ಞೈಃ । ಯಜ್ಞಾ । ಓಽ೨೩ಳವಾ । ಹಾ

೦ ೦ ೦ ೦ ೧ ೨
ಇ ॥ ಬೋ೯ಧಾನಸ್ತೋ೯ಮಮನ್ಧಸೋ೯ಮುಽ೩ದಾಇಷೂಽ

೧ ೨^ ೩೦ ೨^ ೩ ೫ ೨ ೧
೩ । ಆಇಷೂ । ಏಷುವಾ । ಓಽ೨೩ಳವಾ । ಹಾಇ । ಆಇ

೨ ೧ ೨^ ೩೦ ೨^ ೩ ೫ ೨
ಹೀ೯ಽ೩ । ಆಇಹೀ೯ । ಏಹಿಯಾ । ಓಽ೨೩ಳವಾ । ಹಾಽ೩

**ವೃಣೀಮಹೇ** ಪ್ರಾರ್ಥಯಾಮಹೇ । **ಯದ್ಧ** ಸುಪ್ಪೋಲುಕ್ - ೭.೧.೩೯ - ಯಃ **ವಿವಸ್ವತೇ** ವಿಪ್ರೋ ಹವೀರೂಪಂ ಧನಂ ತದ್ವತೇ **ನವ್ಯಸೇ** ನವತರಾಯ ಯಜಮಾನಾಯ **ನಾಭಾ** ನಾಭೌ ಭೂಮ್ಯಾ ನಾಭಿಸ್ಥಾನೇ ದೇವಯಜನೇ । ಯದ್ವಾವೇದಿರೂಪೇ ಅಥವಾ ನಾಭೌ ಸರ್ವಸ್ಯ ಫಲಸ್ಯ ಸಂಬಂಧಕೇ ಯಜ್ಞೇ। ಯಜ್ಞಮಾಹುರ್ಭುವನಸ್ಯ ನಾಭಿಃ ಇತಿ ಶ್ರುತೇಃ । **ಸನ್ದಾಯ** ಸಮ್ಯಕ್ ಬಧ್ವಾ ಮಿಥಃ ಸಂಯುಜ್ಯ **ಕ್ರಾಣಾ** ಧನಾದಿಕಂ ಕುರ್ವಾಣೌ ಭವತಃ । ತೌ ವೃಣೀ ಮಹೇ ಇತಿ ಸಮನ್ವಯಃ । ಯಸ್ಮಾದೇವಂ ತಸ್ಮಾತ್ **ಅಸ್ತು ಶ್ರೌಷಟ್** ಅಸ್ಯಾಃ ಸ್ತುತೇಃ ಶ್ರವಣಂ ಭವತು । ಆಶ್ರಾವಯೇತಿ ಚತುರಕ್ಷರಮ್ ಅಸ್ತು ಔಷಡಿತಿ ಚತುರಕ್ಷರಮ್ ಯಜೇತಿ ದ್ವ್ಯಕ್ಷರಮ್ । ಯೇಯಜಾಮಹೇ ಇತಿ ಪಂಚಾ ಕ್ಷರಮ್ ದ್ವ್ಯಕ್ಷರಃ ವಷಟ್ಕಾರಃ ಏಷ ವೈ ಸಪ್ತದಶಾಕ್ಷರಚ್ಛನ್ದಸ್ಯ - ಇತಿ.ಸಿ.ಕಾ. ವೈ೪.೪.೧೪೦ ॥ ಶ್ರೋತಾ ಭವತು ವಾ ಮರುತಾಂ ಗಣೋSಗ್ನಿರ್ವಾ ಇನ್ದ್ರವಾಯು ಪಕ್ಷೇ ಪ್ರತ್ಯೇಕಾಪೇಕ್ಷಯೈಕವಚನಮ್ । **ಅಧ** ಅನಂತರಂ **ನಃ ಧೀತಯಃ** ಅಸ್ಮದೀಯಾನಿ ಕರ್ಮಾಣಿ ಸ್ತುತ್ಯಾದಿರೂಪಾಣಿ **ಪ್ರನೂನಮ್ ಉಪಯನ್ತಿ** ಪ್ರಕರ್ಷೇಣ ಯುಷ್ಮಾನುಪೇತ್ಯ ಗಚ್ಛನ್ತಿ । **ಕಿಂಚ ದೇವಾನಚ್ಛಾ** ಅಗ್ನ್ಯಾದಿದೇವಾನ್ ಆಭಿಮುಖ್ಯೇನ ಪ್ರಾಪ್ತುಮಿವ **ಧೀತಯಃ** ಅಸ್ಮದೀಯಾನಿ ಕರ್ಮಾಣಿ **ಉಪಯನ್ತಿ** ತೇಷಾಂ ಸಮೀಪಂ ಪ್ರಾಪಯನ್ತಿ ॥

ಆನುತ್ಯತ್ ಆನುತದ್ ಇತಿ ನವ್ಯಸೇ ನವಸಿ ಇತಿ ಪ್ರನೂನಂ ಪ್ರಸೂನ ಮ್ ಇತಿ ಚ ಕ್ರಮೇಣ ಸಾಮ್ನಾಮೃಚಶ್ಚ ಪಾಠಃ ॥

**ಪುರಃ** ನನ್ನ ಎದುರಿಗಿರುವ ಉತ್ತರವೇದಿಯಲ್ಲಿ, **ಅಗ್ನಿಂ** ಆಹವನೀ ಯಾಗ್ನಿಯನ್ನು, **ಧಿಯಾ** ಅಗ್ನಿಪ್ರಣಯನಾದಿ ಕರ್ಮಗಳಿಂದ, **ದಧೇ** ಸ್ಥಾಪಿಸಿ ದ್ದೇನೆ, **ದಿವ್ಯಂ** ದ್ಯುಲೋಕೋತ್ಪನ್ನವಾದ, **ತಚ್ಛರ್ಧಃ** ಆ ಶಕ್ತಿಯುತನಾದ ಅಗ್ನಿಯನ್ನು, **ನು** ಶೀಘ್ರವಾಗಿ, **ಆವೃಣೀಮಹೇ** ಆರಾಧಿಸೋಣ, ಇನ್ದ್ರ ವಾ

ಯೂ ಇನ್ದ್ರ ಮತ್ತು ವಾಯುವನ್ನು, ವೃಣೀಮಹೇ ಆಶ್ರಯಿಸೋಣ, ಯತ್ ಹ ನಮ್ಮ ಭಕ್ತಿಯಕಾರಣ, ವಿವಸ್ವತೇ ಪ್ರಕಾಶಯುತವಾದ, ನಾಭಾ ಪೃಥ್ವಿಯ ನಾಭಿ ರೂಪವಾದ ಯಜ್ಞದ ವೇದಿಕೆಯಲ್ಲಿ ಪ್ರಪಂಚದ ನಾಭಿರೂಪ ಯಜ್ಞದಲ್ಲಿ, ನವ್ಯಸೇ ನೂತನಸ್ತುತಿಯು, ಕ್ರಾಣಾ ಆತ್ಮಪ್ರಕಾಶವನ್ನು ಮಾಡಿಕೊಂಡು, ಸಂದಾಯ ದೇವತೆಗಳಿಗೆ ಅರ್ಪಿತವಾಗಿ ಅವರನ್ನು ಸೇರುವಂತೆ, ಅಸ್ತು ಶ್ರೌಷಟ್ ನಾವು ಮಾಡುವ ಸ್ತುತಿಯು ದೇವತೆಗಳಿಗೆಲ್ಲಾ ಕೇಳಿಸುವಂತಾಗಲಿ, ಅಧಃ ಅನಂತರ, ನಃ ನಮ್ಮ, ಧೀತಯಃ ಸ್ತುತಿ ಆದಿ ಕ್ರಿಯೆಗಳು, ಪ್ರ ಸು ಉಪಯನ್ತು ಅತಿಶಯವಾದ ಕ್ರಮದಿಂದ ದೇವತೆಗಳಲ್ಲಿ ಸೇರಿಕೊಳ್ಳಲಿ, ನಃ ನಮ್ಮ, ಧೀತಯಃ ಯಜ್ಞ ಆದಿ ಕರ್ಮಗಳೂ ಕೂಡ, ದೇವಾನ್ ಅಗ್ನ್ಯಾದಿ ದೇವತೆಗಳನ್ನು, ಅಚ್ಛಾನ ಅಭಿಮುಖವಾಗಿ ಹೊಗಿ ಸೇರಿಕೊಳ್ಳಲಿ.

ನನ್ನ ಮುಂಭಾಗದಲ್ಲಿರುವ ಉತ್ತರವೇದಿಯಲ್ಲಿ ಅಗ್ನಿಪ್ರಣಯನಾದಿ ವಿಧ್ಯುಕ್ತ ಕರ್ಮಗಳಿಂದ ಆಹವನೀಯಾಗ್ನಿಯನ್ನು ಪ್ರತಿಷ್ಠಾಪಿಸಿದ್ದೇನೆ. ನಾವು ಅಗ್ನಿಯ ದಿವ್ಯಶಕ್ತಿಯನ್ನೂ ಇನ್ದ್ರನನ್ನೂ ವಾಯುವನ್ನೂ ಆಶ್ರಯಿಸೋಣ. ಪೃಥ್ವಿಯ ನಾಭಿಯೆಂದೆನಿಸಿರುವ ಯಜ್ಞದಲ್ಲಿ ಶ್ರದ್ಧಾಭಕ್ತಿಯಿಂದ ಅರ್ಪಿಸಿರುವ ನಮ್ಮ ನೂತನ ಸ್ತುತಿಗಳು ದೇವತೆಗಳ ಕಿವಿಗಳನ್ನು ಮುಟ್ಟಲಿ, ನಮ್ಮ ಸ್ತುತಿರೂಪದ ಹಾಗೂ ಯಾಗಾದಿ ಕರ್ಮಗಳು ದೇವತೆಗಳಲ್ಲಿ ಸೇರಿಕೊಳ್ಳಲಿ.

*ಆಹವನೀಯಮಿಪ್ಪ್ರದೆದುರೊಳ್ ವಿಧಿಚೋದಿತಮಾರ್ಗಸಂಸ್ಥಿತಂ*
*ವಹ್ನಿಯನಿಂದ್ರನಂ ಪವನನಂ ಶ್ರಯಿಸೋಣ ಸಮಸ್ತರುಂ ಜನರ್ ।*
*ವಿಶ್ವದ ನಾಭಿಯಲ್ತೆ ಸವನಂ ಬಹುಶ್ರದ್ಧೆಯ ಭಕ್ತಿಯರ್ಪಣಂ*
*ನಮ್ಮ ನವಸ್ತವಂ ಸುರರ ಕರ್ಣಕೆ ಸಲ್ಗೆ ಸವಕ್ಕೆ ಬರ್ಕವರ್ ॥*

# ಋಕ್ - ೪೬೨

ಏವಯಾಮರುದಾತ್ರೇಯಃ । ಅತಿಜಗತೀ ಮರುತಃ ಅಗ್ನಿರ್ವಾ ಇನ್ದ್ರಃ ॥

೧ ೨ ೩ ೨ ೩ ೧ ೨ ೩ ೧ ೨ ೩ ೧ ೨ ೩ ೧
ಪ್ರ ವೋ ಮಹೇ ಮತಯೋ ಯನ್ತು ವಿಷ್ಣವೇ ಮರುತ್ವತೇ ಗಿರಿಜಾ
೨ ೩ ೧ ೨
ಏವಯಾಮರುತ್ ।

೧ ೨೦ ೨೦ ೩ ೧ ೨ ೩ ೧ ೨ ೩ ೧ ೨ ೩
ಪ್ರ ಶರ್ದ್ಧಾಯ ಪ್ರ ಯಜ್ಯವೇ ಸುಖಾದಯೇ ತವಸೇ ಭನ್ದದಿಷ್ಟಯೇ

೧ ೨ ೩ ೧ ೨
ಧುನಿವ್ರತಾಯ ಶವಸೇ ॥ ೬. ೪೬೨ ॥

೨ ೩ ೨ ೩ ೧ ೨ ೩ ೧ ೨೦ ೩ ೧ ೨ ೩ ೨
ಪ್ರ - ವಃ - ಮಹೇ - ಮತಯಃ - ಯನ್ತು - ವಿಷ್ಣವೇ । ಮರುತ್ವತೇ - ಗಿರಿಜಾಃ

೩ ೨ ೩ ೧ ೨ ೩ ೨ ೩ ೨
- ಗಿರಿ - ಜಾಃ - ಏವಯಾಮರುತ್ - ಏವಯಾ - ಮರುತ್ ॥ ಪ್ರ -

೧ ೨೦ ೧ ೨೦ ೩ ೧ ೨ ೩ ೧ ೨ ೩ ೧ ೨
ಶರ್ದ್ಧಾಯ - ಪ್ರ - ಯಜ್ಯವೇ - ಸುಖಾದಯೇ - ಸು - ಖಾದಯೇ । ತವಸೇ -

೩ ೧ ೨ ೩ ೨ ೩ ೧ ೨೦ ೧ ೨೦ ೩
ಭನ್ದದಿಷ್ಟಯೇ - ಭನ್ದತ್ - ಇಷ್ಟಯೇ । ಧುನಿವ್ರತಾಯ - ಧುನಿ - ವ್ರತಾಯ -

೧ ೨೦
ಶವಸೇ ॥ ೬. ೪೬೨ ॥

ಏವಯಾಮರುತಃ ಸಾಮ । ಏವಯಾಮರುದತಿಜಗತೀನ್ದ್ರಃ ॥

೪೬೨.೧. ಪ್ರಾ೭೨೩೪ । ವೋಮಹೇಮತಯೋ೭ಯನ್ತುವಿಷ್ಣವೋ । ಹಾಇ ॥ ಮರುತ್ವತಾ೭೩ಇಗಿರಿಜಾ೭೩೪: । ಹಾಹೋ೭ಇ । ಏವಾಯಾ೭೨ । ಮಾ೭೨೩೪ರೂತ್ । ಪ್ರಾಶರ್ದ್ಧಾಯಾ೭೨ । ಪ್ರಾಯಜ್ಯಾವಾ೭೨೩ಇ । ಸೂಖಾದಾ೭೨೩೪ಯಾಇ । ತವಸೇಭನ್ದದಿಷ್ಟಯೇ ॥ ಧುನಾಇವ್ರಾ೭೩ತಾ೭೩ ॥ ಯಾ೭೨ಶಾ೭೨೩೪ಔಹೋ೭ವಾ ॥ ವಾ೭೨೩೪ಸೇ ॥

*ದೀ - ೯ । ಪ - ೧೪ । ಮಾ - ೯ । ಧೋ । ೩೩ । ೮೦೪ ॥*

**ಪ್ರಯನ್ತು** ಪ್ರಗಚ್ಛನ್ತು **ಗಿರಿಜಾಃ** ಗಿರೌ ವಾಚಿ ನಿಷ್ಪನ್ನಾಃ **ಮತಯಃ** ಸ್ತುತಯಃ । **ಮಹೇ** ಮಹತೇ **ವಃ** ತುಭ್ಯಂ ವಚನ ವ್ಯತ್ಯಯಃ - ೩.೧.೮೫ । **ವಿಷ್ಣವೇ** ವ್ಯಾಪ್ತಾಯಾಮ್ ಇನ್ದ್ರಾಯ ವಿಷ್ಣವೇ ವಾ **ಮರುತ್ವತೇ** ಮರುದ್ಭಿಃ ಸ್ತದ್ವತೇ ಕಸ್ಯ ಸ್ತುತಯಃ ಇತ್ಯುಚ್ಯತೇ **ಏವಯಾಮರುತ್** ಏತನ್ನಾಮಕಸ್ಯ ಋಷೇಃ ಷಷ್ಠ್ಯಾ ಲುಕ್ - ೭.೧.೩೯ ॥ ಅಥವಾ೭ಯಮೃಷಿಃ ಗಿರಿಜಾಃ ಸ್ತುತೇ ರ್ಜನಯಿತಾ ಭವತಿ । ಕಿಂಚ **ಪ್ರಯನ್ತು** ಸ್ತುತಯಃ **ಕಸ್ಮೈ? ಶರ್ದ್ಧಾಯ** ಬಲಾಯ ಮಾರುತಾಯ ಇತರತ್ಸರ್ವಂ ಬಲವಿಶೇಷಣಮ್ **ಪ್ರಯಜ್ಯವೇ** ಪ್ರಕರ್ಷೇಣ ಯಷ್ಟವ್ಯಾಯ **ಸುಖಾದಯೇ** ಶೋಭನಾಭರಣಾಯ ಖಾದಿರಾ ಭರಣ

ವಿಶೇಷಃ । ಹಸ್ತೇಷು ಖಾದಿಶ್ಚ ಕೃತಶ್ಚ ಸಂದಧೇ ಋ.ಸಂ.೧.೧೬೮.೩., ಋ.ಸಂ. ೫.೫೪.೧೧ । ಇತಿ ಅಂಸೇಷು ಚ ಋಷಯಃ ಪತ್ಸು ಖಾದಯಃ ಇತಿ ಚ ಶ್ರುತೇಃ । ತವಸೇ ಬಲವತೇ । **ಭನ್ದದಿಷ್ಟಯೇ** ಸ್ತುತಿರೂಪಾ ಇಷ್ಟಿರ್ಯಸ್ಯ ತತ್ ಭನ್ದ ದಿಷ್ಟಿಃ ತಸ್ಮೈ । **ಧುನಿವ್ರತಾಯ** ಮೇಘಾನಾಂ ಚಾಲನಂ ಕರ್ಮ ಯಸ್ಯ ತಾದೃಶಾಯ ಶವಸೇ ಗಮನವತೇ ॥

ಏವಯಾಮರುತ್ ಏವಯಾ ಮರುತ್ತೆಂಬ ಹೆಸರಿನ ಋಷಿಯು, ಗಿರಿ ಜಾಃ ವಾಣಿಯಿಂದ ಉದಯವಾದ, ಹೃದಯದಿಂದ ಹೊಮ್ಮಿದ, ಗೋಃ ಇತಿ ನಿಘಂಟೌ ವಾಙ್ನಾಮಸು ೧.೧೧, ದೃಶ್ಯತೇ ತಸ್ಯ ಸಪ್ತಮ್ಯಾಂ ಗಿರಿ ಇತ್ಯೇವ ವಕ್ತವ್ಯಮ್ । ನ ತು ಗಿರಾವಿತಿ । ತದತ್ರ ತ್ಯ ಪಾಠೋ ಲಿಪಿಕಾರ ಪ್ರಮಾದ ಇವ ಲಕ್ಷ್ಯತೇ । ವಿವರ ಕೃತಾತು ಗಿರಿಜಾ ಹೃದಯೇ ಜಾತಾ ಯಜ್ಞಜಾತಾ ವಾ ಇತ್ಯು ಕ್ತಮ್ ॥, ಮತಯಃ ಸ್ತುತಿಗಳು, ಮಹೇ ಮಹಾಮಹಿಮನೂ, ಮರುತ್ವತೇ ಮರುತ್ತುಗಳಿಂದ ಕೂಡಿದವನೂ, ವಿಷ್ಣವೇ ವ್ಯಾಪಕನೂ ಆದ, ವಿಷ್ಣುನಾಮಕೇ ನ್ದ್ರಾಯ - ಇತಿ ವೇತ್ಯರ್ಥಃ । ಇನ್ದ್ರಃ ವಿಷ್ಣುಃ ಪರ್ಯಾಯೇತಿ ಭಾವಃ । ಇಹ ಚ ಮಾನಂ ನಿಘಣ್ಟೌ । ವಿಷ್ಣುಪುರಾಣಾದೌ ಚ ದ್ವಾದಶಾದಿತ್ಯೇಷು ಉಭಯೋ ರೇವ ಪರಿಗಣನಮ್ ॥ ವಃ ಇನ್ದ್ರನಾದ ನಿನ್ನನ್ನುದ್ದೇಶಿಸಿ, ಪ್ರಯನ್ತು ಅತಿಶಯ ವಾಗಿ ಅರ್ಪಿತವಾಗಲಿ, ಪ್ರಯಜ್ಯವೇ ಅತ್ಯಂತ ಪೂಜ್ಯವಾದುದೂ, ಹೆಚ್ಚು ಹೆಚ್ಚು ಯಜ್ಞಗಳನ್ನು ಮಾಡುವುದರಿಂದ ಯಾಗಶೀಲವಾದುದೂ, ಸುಖಾದಯೇ ಸುಂದರ ಖಾದಿರ ವಿಶಿಷ್ಟ ಆಭರಣಗಳನ್ನುಳ್ಳದ್ದೂ - ಅಂಸೇಷು, ಚ ಋಷಯಃ ಪತ್ಸು ಖಾದಯಃ - ಋ.ಸಂ.೫.೫೪.೧೧ ॥ ಹಸ್ತೇಷು ಖಾದಿಶ್ಚ ಕೃತಿಶ್ಚ ಸನ್ದಧೇ - ಋ.ಸಂ.೧.೧೬೮.೩ ॥ ತವಸೇ ಶಕ್ತಿಯುತವಾದುದೂ ಬಲಶಾಲಿಯಾದುದೂ, **ಭನ್ದದಿಷ್ಟಯೇ** ಸ್ತುತಿರೂಪೀ ಯಜ್ಞವುಳ್ಳದ್ದೂ, ಮನ್ದನ್ತಿ ಸ್ತುವನ್ತಿ ಇಷ್ಟಯಃ ಯಜ ಮಾನಾಃ ಯಂ ತಸ್ಮೈ - ವಿ ॥ **ಧುನಿವ್ರತಾಯ** ಶತ್ರುವನ್ನು ದೂರಮಾಡುವ ವ್ರತ ವುಳ್ಳದ್ದೂ ಮೇಘಗಳನ್ನು ಕಂಪನಗೊಳಿಸುವುದೂ, ಧುನಿಃ ಕಂಪನಂ ಮೇಘಾ

ನಾಂ ವ್ರತಂ ಕರ್ಮ ಯಸ್ಯೈ ತಸ್ಯೈ - ವಿ ॥ ಶವಸೇ ವೇಗಗಾಮಿಯಾದುದೂ ಆದ, ಶರ್ಧಾಯ ಮರುದ್ಗಣಗಳಿಗೆ, ಪ್ರ ಯನ್ನು ಅತಿಯವಾಗಿ ಹೋಗಿ ಸೇರಲಿ.

ಏವಯಾ ಮರುತ್ ಋಷಿಯ ಹೃದಯದಿಂದ ಹೊಮ್ಮಿದ ಸ್ತುತಿಗಳು ಮಹಾಮಹಿಮನೂ ಮರುದ್ಗಣಗಳೊಂದಿಗಿರುವವನೂ ವ್ಯಾಪಕನೂ ಆದ ಇನ್ದ್ರನೇ ನಿನಗೆ ಅರ್ಪಿತವಾಗಲಿ. ಬಹು ಪೂಜ್ಯವಾದುದೂ ಖಾದಿರ ವಿಶಿಷ್ಟ ಆಭರಣವುಳ್ಳದ್ದೂ ಶಕ್ತಿಯುತವಾದದೂ ಸ್ತುತಿರೂಪಿ ಯಜ್ಞವುಳ್ಳದ್ದೂ ಮೇಘಗಳು ಚಲಿಸುವಂತೆ ಮಾಡತಕ್ಕದ್ದೂ ಬಹು ವೇಗವುಳ್ಳದ್ದೂ ಆದ ಈ ಸ್ತುತಿಗಳು ಮರುದ್ಗಣಗಳಿಗೆ ಅತಿಶಯವಾಗಿ ಅರ್ಪಿತವಾಗಲಿ.

ಏವಯಾಮರುನ್ಮುನಿಯ ಹೃದಯದಿಂ ಹೊಮ್ಮಿದ ನುತಿಮಂತ್ರಂ
ಮರುನ್ನಾಯಕನಿಗಿಂದ್ರನಿಗೊಪ್ಪಿಗೆಯಕ್ಕೆ ಸುಮಹಿತಂಗಂ ।
ಖಾದಿರಾಭರಣವೈಶಿಷ್ಟ್ಯಂ ಸ್ತುತಿರೂಪಿಯಜ್ಞಸಂಪನ್ನಂ
ಜಲದಸಂಚರಣಚಣಮಾರುತಸಂಪ್ರೀತಿಯಕ್ಕೆ ನುತಿಯೀ ॥

## ಋಕ್ - ೪೬೩

ಅನಾನತಃ ಪಾರುಚ್ಛೇಪಿಃ । ಅತ್ಯಷ್ಟಿಃ ಪವಮಾನಃ ಸೋಮಃ ॥

೩ ೨ ೩ ೧ ೨ರ ೩ ೨ಉ ೩ ೧ ೨
ಅಯಾ ರುಚಾ ಹರಿಣ್ಯಾ ಪುನಾನೋ ವಿಶ್ವಾ ದ್ವೇಷಾಂಸಿ ತರತಿ

೩ ೧ ೨ ೩ ೨ ೩ ೨ ೩ ೧ ೨
ಸಯುಗ್ವಭಿಃ ಸೂರೋ ನ ಸಯುಗ್ವಭಿಃ ।

೧ ೨ ೩ ೧ ೨ ೩ ೧ ೨ ೩ ೧ ೧ ೨ರ
ಧಾರಾ ಪೃಷ್ಠಸ್ಯ ರೋಚತೇ ಪುನಾನೋ ಅರುಷೋ ಹರಿಃ ।

೨ ೩ ೨ ೩ ೧ ೨೩ ೧ ೨೦ ೩ ೧ ೨ ೩ ೧ ೨
ವಿಶ್ವಾ ಯದ್ರೂಪಾ ಪರಿಯಾಸ್ಯೃಕ್ವಭಿಃ ಸಪ್ತಾಸ್ಯೇಭಿರೃಕ್ವಭಿಃ ॥

೩ ೨ ೩ ೨ ೧ ೨೦ ೩ ೨ ೧ ೨೦ ೧ ೨೦ ೩
ಆಯಾ - ರುಚಾ - ಹರಿಣ್ಯಾ - ಪುನಾನಃ । ವಿಶ್ವಾ - ದ್ವೇಷಾಂಸಿ - ತರತಿ -

೧ ೨ ೩ ೧ ೨೦ ೧ ೨೦ ೩ ೧ ೨ ೩ ೧ ೨೦
ಸಯುಗ್ವಭಿಃ - ಸ - ಯುಗ್ವಭಿಃ ॥ ಸೂರಃ - ನ - ಸಯುಗ್ವಭಿಃ - ಸ - ಯುಗ್ವ

೧ ೨೦ ೩ ೧ ೨ ೩ ೨ ೩ ೨ ೧ ೨೦ ೧ ೨೦
ಭಿಃ । ಧಾರಾ । ಪೃಷ್ಠಸ್ಯ - ರೋಚತೇ । ಪುನಾನಃ - ಅರುಷಃ - ಹರಿಃ । ವಿಶ್ವಾ -

೩ ೨ ೩ ೧ ೨ ೩ ೧ ೨೦ ೧ ೨೦ ೩ ೧ ೨
ಯತ್ - ರೂಪಾ - ಪರಿಯಾಸಿ - ಪರಿ - ಯಾಸಿ - ಋಕ್ವಭಿಃ । ಸಪ್ತಾಸ್ಯೇಭಿಃ -

೩ ೨ ೩ ೧ ೨೦
ಸಪ್ತ - ಆಸ್ಯೇಭಿಃ - ಋಕ್ವಭಿಃ ॥ ೭. ೪೬೩ ॥

ವಿಷಮಾಣಿ ತ್ರೀಣಿ । ಭರದ್ವಾಜೋಽತ್ರ್ಯಷ್ಟಿಸ್ತೋಮಃ ॥

೪ ೫ ೧ ೨^ ೩ ೪ ೫ ೧ ೦ ೦ ೦
೪೬೩.೧. ಆಯಾ ॥ ರುಚಾ । ಹರಿ । ಣ್ಯಾಪುನಾನಾಃ । ವಿಶ್ವಾದ್ವೇಷಾ

೪ ೨ ೩ ೫ ೨೦ ೧ ೨
ಂಸಿತರತೀ೨೩ಸಾಽ೩ಯುಗ್ವಭಿಃ ॥ ಸೂರೋಽ೨೩ನಾಽ

೧ ^ ೩ ೫೦ ೦ ೩ ೫
೩ ॥ಸಾಽ೨ಯೂಽ೨೩೪ಔಹೋವಾ ॥ಗ್ವಾಽ೨೩೪ಭೀಃ॥

ದೀ - ೬ । ಪ - ೮ । ಮಾ - ೪ । ಗೀ । ೩೪ । ೮೦೫ ॥

೫ ೦ ೩ ೨೦ ೩ ೪ ೫ ೨ ೦ ೧ ೦
೪೬೩.೨. ಆಯಾರುಚಾಹರಿಣ್ಯಾ ॥ ಪುನಾನಃ । ವಿಶ್ವಾದ್ವಾಽ೨೩ಇ

೨ ೧ ೨ ೦ ೦ ೨ ೧
ಷಾ । ಸಾಇತರ । ತ್ಯಾಹೋ । ವಾಽ೩ಹಾಽ೩ಇ । ಸಾ

^ ೩ ೫ ೨ರ ೧ ೨^ ೩
ಯೂಽ೨ಗ್ವಾಽ೨೩೪ಭೀಃ ॥ ಸೂರೋಽ೨೩ನಾ ॥ ಸ

೨ ೪ ॥
ಯೂಽ೩ಗ್ವಾಽ೫ಭಾಽ೬೫೬ಇಃ ॥

*ದೀ - ೭ । ಪ - ೯ । ಮಾ - ೭ । ಝೋ । ೩೫ । ೮೦೬ ॥*

೪ ೩ರ ೪ ೩ರ ೪.೫ರ ೧ ೦ ೦ ೫ರ
೪೬೩.೩. ಅಯಾರುಚಾಹರಿಣ್ಯಾ ॥ ಪೂಽ೨೩೪ । ನಾನೋವಿಶ್ವಾ

೪ ೫ ೧ ೨ ಅ — ೧
ದ್ವೇಷಾ ॥ ಸಾಇತರತಿ । ಸಾಯುಗ್ವಾಭೀಽ೨: । ಸೂರೋ

೨ ೧ ^ ೩ ೫ ೪ರ ೫ರ ೪
ನಾಽ೩ । ಸಾಯೂಽ೨ಗ್ವಾಽ೨೩೪ಭೀಃ । ಧಾರಾಪೃಷ್ಠಾ ।

೧ — ೧ ೨ ೧ ೨ ೧ ೨^ ೩
ಸ್ಯಾರೋಽ೨ಚತಾಇ । ಪುನಾನೋಽಆಽ೩ । ರೂಷೋಽಹಾ

೫ ೪ ೫ರ ೪ ೧ ೨ ೦ ೧ ಅ
ಽ೨೩೪ರೀಃ । ವಿಶ್ವಾಯದ್ರೂ । ಪಾಪರಿಯಾ । ಸಾಯುಕ್ವಾ

— ೧ ೨ ೨ ೧ ೪
ಭೀಽ೨: ॥ ಸಪ್ತಾಸೀಽ೩ಯೇಽ೩ ॥ ಭಾಽ೨೩ಇರಾಽ೩ ।

೨ ॥ ೫
ಕ್ವಾಽ೩೪೫ಭೋಽ೬ಹಾಇ ॥

*ದೀ - ೧೦ । ಪ - ೧೭ । ಮಾ - ೧೦ । ಘಾ । ೩೬ । ೮೦೭ ॥*

ಪುನಾನಃ ಪೂಯಮಾನಃ ಸೋಮಃ **ಹರಿಣ್ಯಾ** ಹರಿತವರ್ಣಯಾ **ಅಯಾ** ಅನಯಾ **ರುಚಾ** ರೋಚಮಾನಯಾ ಧಾರಯಾ **ವಿಶ್ವಾ** ಸರ್ವಾಣಿ **ದ್ವೇಷಾಂಸಿ** ದ್ವೇಷ್ಟೄಣಿ ರಕ್ಷಾಂಸಿ **ತರತಿ** **ವಿನಾಶಯತಿ** । ತತ್ರ ದೃಷ್ಟಾನ್ತಃ **ಸೂರೋ**ನ ಯಥಾ ಸೂರ್ಯಃ **ಸಯುಗ್ವಭಿಃ** ಸಹ ಯುಕ್ತೈರಶ್ಮಿಭಿಃ ತಮಾಂಸಿ ಹಿನಸ್ತಿ ತದ್ವತ್ ಸಯುಗ್ವಭಿರಿತಿ ದ್ವಿರುಕ್ತಿರಾದರಾರ್ಥಾ । ಯದ್ವಾ! ಧಾರಯಾ ಯುಕ್ತಃ ಸೋಮೋ ಯುಕ್ತೈಸ್ತೇಜೋಭಿಃ ಸಹ ರಕ್ಷಾಂಸಿ ತರತಿ । ತಸ್ಯ **ಪೃಷ್ಠಸ್ಯ** ಪೃಷ್ಠ ಇತಿ ಧಾರಕ ಉಚ್ಯತೇ ಜಗತೋ ಧಾರಕಸ್ಯ ಸೋಮಸ್ಯ ಪತಂತೀ ಧಾರಾ **ರೋಚತೇ** ದೀಪ್ಯತೇ । **ಪುನಾನಃ** ಪೂಯಮಾನಃ **ಹರಿಃ** ಹರಿತವರ್ಣಃ ಸೋಮಃ **ಅರುಷಃ** ಆರೋಚಮಾನೋ ಭವತಿ । **ಯದ್** ಯಃ ಸೋಮಃ **ಸಪ್ತಾಸ್ಯೇಭಿಃ** ರಸಾಹರಣಶೀಲಾಸ್ಯೈಃ **ಋಕ್ವಭಿಃ** ಸ್ತುತಿಮದ್ಭಿಃ ಋಕ್ವಭಿಸ್ತೇಜೋಭಿಃ **ವಿಶ್ವಾ** ವಿಶ್ವಾನಿ ಸರ್ವಾಣಿ ರೂಪಾಣಿ **ಪರಿಯಾತಿ** ಪರಿತೋವ್ಯಾಪ್ನೋತಿ ॥ ಪೃಷ್ಠಸ್ಯ ಸುತಸ್ಯ ಇತಿ ನಾಮ್ನ ಋಚಃ ಪಾಠೌ ॥

ಪುನಾನಃ ಶುದ್ಧಿಯನ್ನು ಹೊಂದತಕ್ಕ ಸೋಮನು, ಹರಿಣ್ಯಾ ಪಚ್ಚೆ ಬಣ್ಣದ, ಧಾರಾಕಾರದ, **ಅಯಾರುಚಾ** ಪ್ರಕಾಶಮಾನವಾದ ಪ್ರಭೆಯಿಂದ, **ವಿಶ್ವಾ** ಸಮಸ್ತವಾದ, **ದ್ವೇಷಾಂಸಿ** ದ್ವೇಷಿಗಳನ್ನೂ ಶತ್ರುಗಳನ್ನೂ, **ಸೂರಃ** ಸೂರ್ಯನು, **ಸಯುಗ್ವಭಿಃ** ನ ತನ್ನಿಂದ ಉದಯವಾದ ತೇಜೋಮಯಕಿರಣಗಳಿಂದ ಅಂಧಕಾರವನ್ನು ನಾಶಮಾಡುವಂತೆ, **ಸಯುಗ್ವಭಿಃ** ತನ್ನ ತೇಜಸ್ಸಿನಿಂದ, ಸಯು ಗ್ವಭಿಃ ಇತಿ ಪುನರುಕ್ತಿಃ ಪರುಚ್ಛೇಪಸ್ಯ ಪಿತುಃ ಶೈಲೀಯಮ್ । ಪಾರುಚ್ಛೇಪಿಃ ಹ್ಯನಾ ನತಃ - ವಿ ॥ **ತರತಿ** ದಾಟಿಸುತ್ತಾನೆ, ನಾಶಮಾಡುತ್ತಾನೆ, **ಪೃಷ್ಠಸ್ಯ** ಜಗತ್ತನ್ನೇ ಧಾರಣಮಾಡಿರುವ ಸೋಮನ ಪೃಷ್ಠ ಸ್ಪೃಶತೇಃ - ನಿರು.೪.೩ ॥ ಆತ್ಮಾ ವೈ ಪೃಷ್ಠಾನಿ - ಕೌ.೨೫.೧೨ ॥ **ಧಾರಾ** ಪ್ರವಾಹವು, **ರೋಚತೇ** ದೀಪ್ತಿಗೊಂಡು ಬೆಳಗುತ್ತದೆ, ರೂಪಂ ರೋಚತೇ - ನಿರು.೩.೧೩ ॥ **ಯತ್** ಯಾವ ಸೋಮವು, **ಸಪ್ತಾಸ್ಯೇಭಿಃ** ವಕ್ರಗತಿಯುಳ್ಳದ್ದೂ, ಸರ್ಪಣಶೀಲ ಮುಖ್ಯೈಃ - ವಿ ॥ ರಸಹರಣ

ಶೀಲವಾದ ಸಪ್ತಸಂಖ್ಯಾಕ ಮುಖವುಳ್ಳದ್ದೂ ಸಪ್ತೈತಾ ನಾದಿತ್ಯ ರಶ್ಮೀನ್ ಆಯಮಾದಿತ್ಯೋ ಗಿರತಿ - ನಿ.೨.೨೧ ॥ ಸಪ್ತ ಛನ್ದಾಂಸಿ ಅಸ್ಯ ಭೂತಾನಿ ಯೇಷ್ವಾಮೃತ್ವಿಜಾಂತೇ ಸಪ್ತಾಸ್ಯಾಃ । ತ್ಯೈಃ ಸಪ್ತಾಸ್ಯೇಭಿಃ । ಅಥವಾ ಸಪ್ತ ವಷಟ್ ಕಾರಿಣೋ ಹೋತಾರಃ ಸಪ್ತಸ್ಯಾನಿ । ಸಪ್ತಸೋಮ ಸಂಸ್ಥಾಃ ಸಪ್ತಾಸ್ಯಾನಿ । ತಾಭಿಃ । ಇತಿ ವಿ ॥ **ಋಕ್ವಭಿಃ** ಸ್ತುತಿಗಳ ತೇಜೋವಿಶೇಷದಿಂದ ಕೂಡಿದ್ದೂ, ಜ್ಯೋತಿಸ್ಪೃದೃಕ್ - ಜೈ.೧.೭೬ ॥ ಋತ್ವಿಜರ ಸೇವೆಯಿಂದ ಉಪಚರಿಸಲ್ಪಟ್ಟಿದ್ದೂ, ವಿಶ್ವಾ ಸರ್ವವ್ಯಾಪಕವಾದ, **ರೂಪಾ** ನಕ್ಷತ್ರಾದಿ ರೂಪಗಳನ್ನು - ರೂಪಂ ರೋಚತೇ - ನಿರು.೩.೧೩ ॥ **ಪರಿಯಾತಿ** ಹೊಂದಿರುವಂತಹದೂ, **ಪುನಾನಃ** ಶುದ್ಧಿಯನ್ನು ಹೊಂದುವುದೂ ಪೂಯಮಾನಃ ಆರೋಚಮಾನ ಇತಿ ವಾ ಗನ್ತೇತಿ ವಾ - ವಿ ॥ **ಹರಿಃ** ಹರಣಶೀಲದ್ದೂ ಪಚ್ಚೆ ಬಣ್ಣದ್ದೂ ಆದ ಸೋಮವು, ಆರುಷ ಪ್ರಕಾಶಮಾನವಾಗಿ ಹೊಳೆಯುತ್ತಿರುತ್ತದೆ.

ಶುದ್ಧಿಯನ್ನು ಹೊಂದತಕ್ಕ ಸೋಮನು ಪಚ್ಚೆವರ್ಣದ ತನ್ನ ಪ್ರಭೆಯ ತೇಜಸ್ಸಿನಿಂದ ಸಮಸ್ತ ಶತ್ರುಗಳನ್ನೂ ಸೂರ್ಯನು ತನ್ನ ಕಿರಣಗಳಿಂದ ಅಂಧಕಾರವನ್ನು ನಾಶಮಾಡುವಂತೆ ನಾಶಮಾಡಿ ಗಂಡಾಂತರದಿಂದ ನಮ್ಮನ್ನು ದಾಟಿಸುತ್ತಾನೆ. ಸ್ತುತಿಗಳ ತೇಜೋವಿಶೇಷದಿಂದಲೂ ಋತ್ವಿಜರ ಸೇವೋಪಚಾರಗಳಿಂದಲೂ ಸರ್ವವ್ಯಾಪಕವಾಗಿ ನಕ್ಷತ್ರಾದಿ ರೂಪಗಳಿಂದ ವಿಜೃಂಭಿಸುತ್ತಾ ಜಗತ್ತನ್ನೇ ಧರಿಸಿರುವ ಸೋಮನು ವಕ್ರಗತಿಯುಳ್ಳವನೂ ಸಪ್ತಸಂಖ್ಯಾಕ ಮುಖವುಳ್ಳವನೂ ಆಗಿ ಪ್ರಕಾಶಿಸುತ್ತಾ ಹೊಳೆಯುತ್ತಿರುತ್ತಾನೆ.

*ಸೋಮಂ ವಿಶುದ್ಧನತಿಹಾರಿಹರಿತ್ಪ್ರಕಾಶಂ*
*ಸೂರ್ಯಂ ತಮೋsರಿಯೆನಿಪಂದದೆ ಲೀಲೆಯಿಂದಂ ।*
*ಪ್ರೊಯ್ವಂ ವಿರೋಧಿಗಳನ್ ಎಲ್ಲೆಡೆ ಸಂದು ಋತ್ವಿಕ್-*
*ಸೇವ್ಯಂ ಜಗದ್ಧರನೆನಲ್ ಮೆರೆವಂ ಸುರೂಪಂ ॥*

# ಋಕ್ - ೪೬೪

ನಕುಲಃ । ಅತ್ಯಷ್ಟಿಃ ಸವಿತಾ ॥

೩ ೨ಉ ೩ ೧ ೨ ೩ ೧ ೨ ೩ಕ ೨ರ ೩ ೧ ೨ ೩ ೧ ೨
ಅಭಿ ತ್ಯಂ ದೇವಙ್ ಸವಿತಾರಮೋಣ್ಯೋಃ ಕವಿಕ್ರತುಮರ್ಚಾಮಿ

೩ ೧ ೨ ೩ ೨ ೩ ೨ ೩ ೨ ೩ ೨
ಸತ್ಯಸವಙ್ ರತ್ನಧಾಮಭಿ ಪ್ರಿಯಂ ಮತಿಮ್ ।

೩ ೨ಉ ೩ ೨ ೩ ೧ ೨ರ ೩ ೧ ೨ ೩ ೧ ೨
ಊರ್ಧ್ವಾ ಯಸ್ಯಾಮತಿರ್ಭಾ ಅದಿದ್ಯುತತ್ಸವೀಮನಿ ಹಿರಣ್ಯಪಾಣಿರ

೩ ೧ ೨ ೩ ೧ ೨
ಮಿಮೀತ ಸುಕ್ರತುಃ ಕೃಪಾ ಸ್ವಃ ॥ ಲ. ೪೬೪ ॥

೩ ೨ ೩ ೨ ೩ ೧ ೨ ೩ ಕ೨ ೩ ೧ ೨ ೩ ೨
ಅಭಿ - ತ್ಯಂ - ದೇವಂ - ಸವಿತಾರಂ - ಓಣ್ಯೋಃ - ಕವಿಕ್ರತುಮ್ - ಕವಿ -

೩ ೧ ೨ರ ೩ ೧ ೨ ೩ ೨ ೩ ೨ ೩ ೨
ಕ್ರತುಮ್ । ಅರ್ಚಾಮಿ - ಸತ್ಯಸವಂ - ಸತ್ಯ - ಸವಂ - ರತ್ನಧಾಂ - ರತ್ನ - ಧಾಂ

೩ ೨ ೨ ೩ ೨ ೩ ೨ ೧ ೨ರ ೩ ೧ ೨
- ಅಭಿ - ಪ್ರಿಯಂ - ಮತಿಮ್ ॥ ಊರ್ಧ್ವಾ - ಯಸ್ಯ - ಅಮತಿಃ - ಭಾಃ

೧ ೨ರ ೧ ೨ರ ೧ ೨ರ ೧ ೨ರ ೩ ೩
ಅದಿದ್ಯುತತ್ - ಸವೀಮನಿ । ಹಿರಣ್ಯಪಾಣಿಃ - ಹಿರಣ್ಯ - ಪಾಣಿಃ - ಅಮಿಮೀತ

೧ ೨ ೩ ೧ ೨ರ ೩ ೨ ೧ ೨
- ಸುಕ್ರತುಃ - ಸು - ಕ್ರತುಃ - ಕೃಪಾ - ಸ್ವಾ೩ಃರಿತಿ ॥ ಲ. ೪೬೪ ॥

ಸವಿತುಸ್ಸಾಮ । ಸವಿತಾತ್ಯಷ್ಟಿಃ ಸವಿತಾ ॥

೪೬೪.೧. ಅಭಿತ್ಯನ್ದೇವಁ ಸವಿತಾರಮ್ । ಔಹೌಹೋವಾಹಾಇ ॥

ಓಣಾ೨೩೪ಯೋಃ । ಕವಿಕ್ರಾ೨೩೪ತೂಮ್ । ಆರ್ಚಾ

ಮೀ೨೩೪ಸಾ । ತ್ಯಾಸಾವಾ೨೩೪ಁ ರಾ । ತ್ನಧಾಮಾ

೨೩೪ಭೀ । ಪ್ರಿಯಮ್ಮಾ೨೩೪ತೀಮ್ । ಔಹೋಔ

ಹೋವಾ೨೩೪ಹಾಉ । ಊರ್ಧ್ವಾಯಾ೨೩೪ಸ್ಯಾ ।

ಆಮಾತೀ೨೩೪ಭಾಃ । ಅದಿದ್ಯೂ೨೩೪ತಾತ್ । ಸವೀ

ಮಾ೨೩೪ನೀ । ಔಹೋಔಹೋವಾ೨೩೪ಹಾಉ ॥

ಹೀರಣ್ಯಾ೨೩೪ಪಾ । ಣೀರಾಮೀ೨೩೪ಮೀ । ತಸುಕ್ರಾ

೨೩೪ತೂಃ । ಔಹೋಔಹೋವಾ೨೩೪೫ಹಾಉ ।

ವಾ ॥ ಏ೨೩ । ಕೃಪಾಸುವಾ೨೩೪೫: ॥

*ದೀ - ೧೭ । ಪ - ೨೧ । ಮಾ - ೧೫ । ಚು । ೩೭ । ೮೦೮ ॥*

**ಸವಿತಾರಂ** ಪ್ರೇರಕಂ **ದೇವಂ** ವಾಗ್ವ್ಯಾಪಾರೇಣ **ಅಭಿ ಅರ್ಚಾಮಿ** ಸರ್ವತಃ ಪೂಜಯಾಮಿ । ಕೀದೃಶಂ **ಕವಿಕ್ರತುಂ** ಕ್ರಾಂತಪ್ರಜ್ಞಂ **ಸತ್ಯಸವಂ** ಅವಿ

ತಥ ಪ್ರೇರಣಮ್ । **ರತ್ನಧಾಂ** ರಮಣೀಯಾನಾಂ ಧನಾನಾಂ ದಾತಾರಮ್ । **ಅಭಿಪ್ರಿಯಂ** ಸರ್ವತಃ ಪ್ರೀತಿಯುಕ್ತಮ್ । **ಮತಿಂ** ಮನನೀಯಂ ಸ್ತುತ್ಯಮ್ **ಯಸ್ಯ** ಸವಿತುಃ **ಭಾ** ದೀಪ್ತಿಃ **ಊರ್ಧ್ವಾ** ಉನ್ನತಾ ಸತೀ **ಓಣ್ಯೋಃ** ದ್ಯಾವಾ ಪೃಥಿವ್ಯೋಃ । **ಅದಿದ್ಯುತತ್** ಅತಿಶಯೇನ ದೀಪ್ಯತೇ । ಯಸ್ಯ ಸವಿತುಃ ಸವೀಮನಿ ಪ್ರಸವೇ ಸತಿ **ಅಮತಿಃ** ಸರ್ವೇಷಾಂ ಕಾನ್ತಿಃ ಅದಿದ್ಯುತತ್ ಭೃಶಂ ಪ್ರಕಾಶತೇ । ಸಃ **ಸುಕ್ರತುಃ** ಶೋಭನಕರ್ಮಾ **ಹಿರಣ್ಯಪಾಣಿಃ** ಹಿರಣ್ಯಹಸ್ತಃ ಸವಿತಾ ದೇವಃ **ಕೃಪಾ** ಕೃಪಯಾ **ಸ್ವಃ** ಸ್ವರ್ಗೇ ನಿಮಿತ್ತಭೂತೇ ಸತಿ **ಅಮಿಮೀತ ಇಮಂ** ಸೋಮಮ್ ಇಯತ್ತಯಾಮಿತವಾನ್ । ಯದ್ವಾ । ಸ್ವಃ ಸರ್ವಸ್ಯಾ ಕೃಪಯಾ ಸಂಕಲ್ಪೇನ ನಿರಮಿಮೀತ ॥

**ಕವಿಕ್ರತುಮ್** ಜ್ಞಾನಪೂರ್ವಕವಾಗಿ ಕರ್ಮ ನೆರವೇರಿಸುವವನೂ, **ಸತ್ಯಸವಮ್** ಸತ್ಯಕ್ಕಾಗಿ ಪ್ರೇರೇಪಿಸುವವನೂ, **ರತ್ನಧಾ** ರಮಣೀಯವಾದ ಧನವನ್ನನುಗ್ರಹಿಸುವವನೂ, **ಅಭಿಪ್ರಿಯಮ್** ಸರ್ವತ್ರ ಸರ್ವರಿಗೂ ಪ್ರೀತಿ ಪಾತ್ರನಾದವನೂ, **ಮತಿಮ್** ಬುದ್ಧಿವಂತನೂ ಮನನಶಕ್ತಿಯುತನೂ, **ತ್ಯಂ ಸವಿತಾರಮ್ ದೇವಮ್** ಆ ಸವಿತೃದೇವನನ್ನು, ಸವಿತಾ ಸರ್ವತ್ರ ಪ್ರಸವಿತಾ - ನಿ.೧೦.೩ । ತಸ್ಯ ಕಾಲೋ ಯದಾ ದ್ಯೌರಪಹತ ತಮಸ್ಕಾಕೀರ್ಣ ರಶ್ಮಿರ್ಭವತಿ - ನಿ.ದೈ.೬. ೧೨ ॥ ಸವಿತಾ ಯನ್ತ್ರೈಃ - ಋ.ಸಂ.೧೦.೧೪೯.೧ ॥, ನಿ.೧೦.೩೨ ॥ ಅತ್ರ ಇದಂ ಯಾಸ್ಕ ಕೃತಂ ವ್ಯಾಖ್ಯಾನಂ । ಸವಿತಾ ಯನ್ತ್ರೈಃ ಪೃಥಿವೀಮರಮಯದನಾರಂಭಣೇಽನ್ತರಿಕ್ಷೇ ಸವಿತಾ ದ್ಯಾಮದೃಂಹದಶ್ವಮಿವಾಧುಕ್ಷದ್ಧು ನಿಮನ್ತರಿಕ್ಷೇ ಮೇಘಂ ಬದ್ಧಮತೂರ್ತೇ ಬದ್ಧಮತೂರ್ಣ ಇತ ವಾ ತ್ವರಮಾಣ ಇತಿ ವಾ ಸವಿತಾ ಸಮುದಿತಾರಮಿತಿ । ಕಮನ್ಯಂ ಮಧ್ಯಮಾ ದೇವಮವಕ್ಷತ । ಆದಿತ್ಯೋಽಪಿ ಸವಿತೋಚ್ಯತೇ ಇತ್ಯಾದಿ, **ಅರ್ಚಾಮಿ** ಆರಾಧಿಸುವೆನು, **ಯಸ್ಯಭಾಃ** ಈ ಸವಿತೃವಿನ ದೀಪ್ತಿಯು ಪ್ರಕಾಶವು, ಕಾಂತಿಯು, **ಊರ್ಧ್ವಾ** ಊರ್ಧ್ವಗತಿಯನ್ನು ಹೊಂದಿ, **ಓಣ್ಯೋ** ಪೃಥಿವೀ ಮತ್ತು ದ್ಯುಲೋಕಗಳ ಮಧ್ಯೆ, ಓಣ್ಯಾ - ದ್ಯಾವಾ ಪೃಥಿವೀ ನಾಮ - ನಿ.ಘಂ.೩೦.೩೦ ॥ **ಅದಿದ್ಯುತತ್** ಹರಡುತ್ತದೆ, ವ್ಯಾಪಿಸುತ್ತದೆ,

ಸವೀಮನಿ ಸರ್ವಪ್ರವೃತ್ತಿಗಳಿಗೂ ಅನುಜ್ಞೆಯನ್ನು ನೀಡುವ ಸವಿತೃವಿನ ಆವಿರ್ಭಾವವಾಗುತ್ತಿದ್ದಂತೆಯೇ, **ಅಮತಿಃ** ಎಲ್ಲವೂ ಆತ್ಮಸಾತ್ ಪ್ರಕಾಶವಾಗಿ ಹೊಳೆಯುವುದು, ಊರ್ಧ್ವಾ ಯಸ್ಯ ಅಮತಿಃ ಆತ್ಮಮಯೀ ಮತಿಃ ಆತ್ಮರೂಪಂ ವಾ - ವಿ ॥ ಆತ್ಮಮಯೀ ಸ್ವಾಧಾರಮತಿ ಅಮತಿ ರಮಾಮಯೀ ಮತಿರಾತ್ಮಮಯೀ - ನಿರು.೬.೧೨ ॥ **ಸುಕ್ರತುಃ** ಉತ್ತಮವಾದ ಶೋಭಾಯಮಾನ ಕರ್ಮಗಳನ್ನು ಕುಶಲತೆಯಿಂದ ನೆರವೇರಿಸುವ, **ಹಿರಣ್ಯಪಾಣಿಃ** ಸವಿತಾ ದೇವತೆಯು ದಾನಾರ್ಥಂ ಪಾಣ್ಯೋಃ ಹಿರಣ್ಯಂ ಯಸ್ಯ ಸಃ ಸದಾ ಸನ್ನಿಹಿತ ಹಿರಣ್ಯಪಾಣಿಃ - ವಿ ॥ **ಕೃಪಾ** ಕೃಪೆಯಿಂದ, **ಸ್ವಃ** ಸ್ವರ್ಗಕ್ಕಾಗಿ, ಸರ್ವಂ ವಾ ಜಗತ್, **ಅಮಿಮೀತ** ಸೋಮಪಾನ ಮಾಡುವವನು ಸಂಪನ್ನವಾಗಿಸುವವನು.

ಸರ್ವಪ್ರೇರಕನೂ ಸರ್ವಜ್ಞನೂ ಸತ್ಯವನ್ನೇ ಪ್ರೇರಿಸುವವನೂ ರಮಣೀಯವಾದ ಬಹುಮೂಲ್ಯವಾದ ರತ್ನಾದಿ ಧನದಾತೃವೂ ಸರ್ವೋತ್ಕೃಷ್ಟವಾದ ಶೋಭಾಯಮಾನವಾದ ಕರ್ಮಗಳನ್ನು ಕುಶಲತೆಯಿಂದ ನೆರವೇರಿಸುವವನೂ ಸ್ತುತ್ಯರ್ಹನೂ ವಾಕ್‌ನಿಂದ ಪೂಜಿಸಲ್ಪಡುವವನೂ ದಾನಮಾಡುವುದಕ್ಕಾಗಿಯೇ ತನ್ನ ಕೈಯಲ್ಲಿ ಹೊನ್ನನ್ನು ತುಂಬಿಕೊಂಡಿರುವವನೂ ಆದ ಸವಿತೃದೇವತೆಯು ತನ್ನ ಊರ್ಧ್ವಗತಿಯ ದೀಪ್ತಿಯಿಂದ ದ್ಯಾವಾಪೃಥಿವಿಗಳನ್ನು ಪ್ರಕಾಶಗೊಳಿಸುತ್ತಾ ನಮ್ಮ ಮೇಲಿನ ಅತಿಶಯ ಕೃಪೆಯಿಂದ ನಾವು ಸ್ವರ್ಗ ಪಡೆಯಲು ಸಹಾಯವಾಗಲೆಂದು ಸೋಮಪಾನ ಮಾಡಿ ನಮ್ಮ ಸಂಕಲ್ಪವನ್ನು ಸಂಪನ್ನಗೊಳಿಸುವವನು.

*ಸರ್ವಪ್ರೇರಕ ಸತ್ಯರೂಪಿ ಸಕಲಜ್ಞಾನಾತ್ಮಕಂ ಕಾಮದಂ*
*ಸರ್ವೋತ್ಕೃಷ್ಟಕೃತೀಶ್ವರಂ ಶ್ರುತಿನುತಂ ದಾನಾವತಾರಂ ಕರಂ ।*
*ಸ್ವರ್ಣಶ್ರೀಕರುಣಾಕರಂ ನಿಜರುಚಿವ್ಯಾಪ್ತಾಂತರಿಕ್ಷಂ ಸದಾ*
*ಭಕ್ತಸ್ವರ್ಗಪದಕ್ಕೆನುತ್ತೆ ದಯೆಯಿಂ ಸೂರ್ಯಂ ರಸಂ ಪೀರ್ದಪಂ ॥*

ಪರುಚ್ಛೇಪೋ ದೈವೋದಾಸಿಃ । ಅತ್ಯಷ್ಟಿಃ ಅಗ್ನಿಃ ॥

೩ ೧ ೨೦ ೩ ೧ ೨ ೩ ೧ ೨ ೩ ೧
ಅಗ್ನಿ೯ ಹೋತಾರಂ ಮನ್ಯೇ ದಾಸ್ವನ್ತಂ ವಸೋಃ ಸೂನು೯

೨೦ ೩ ೧ ೨ ೩ ೨ ೩ ೨ ೩ ೧ ೨
ಸಹಸೋ ಜಾತವೇದಸಂ ವಿಪ್ರಂ ನ ಜಾತವೇದಸಮ್ ॥

೨ ೩ ೧ ೨ ೩ ೨ ೩ ೨ ೩ ೧ ೨ ೩ ೨
ಯ ಊರ್ಧ್ವಯಾ ಸ್ವಧ್ವರೋ ದೇವೋ ದೇವಾಚ್ಯಾ ಕೃಪಾ ।

೩ ೨ ೩ ೧ ೨ ೩ ೧ ೨ ೩ ೧ ೨ ೩ ೧ ೨ ೩ ೧ ೨
ಘೃತಸ್ಯ ವಿಭ್ರಾಷ್ಟಿ ಮನು ಶುಕ್ರಶೋಚಿಷ ಆ ಜುಹ್ವಾನಸ್ಯ ಸರ್ಪಿಷಃ ॥

೩ ೨ ೧ ೨೦ ೩ ೧ ೨೦ ೧ ೨೦ ೩ ೨ ೧ ೨೦
ಅಗ್ನಿಂ – ಹೋತಾರಂ – ಮನ್ಯೇ – ದಾಸ್ವನ್ತಮ್ । ವಸೋಃ – ಸೂನುಂ – ಸಹಸಃ

೩ ೧ ೨ ೩ ೨ ೩ ೧ ೨೦ ೩ ೨ ೩ ೧
– ಜಾತವೇದಸಂ – ಜಾತ – ವೇದಸಂ । ವಿಪ್ರಂ – ವಿ – ಪ್ರಂ – ನ – ಜಾತ

೨ ೩ ೨ ೩ ೨ ೩ ೧ ೨ ೩ ೨ ೩
ವೇದಸಂ – ಜಾತ – ವೇದಸಂ ॥ ಯಃ – ಊರ್ಧ್ವಯಾ – ಸ್ವಧ್ವರಃ – ಸು –

೨ ೩ ೨ ೩ ೧ ೨ ೩ ೨ ೩ ೧ ೨ ೧ ೨೦ ೩
ಅಧ್ವರಃ । ದೇವಃ – ದೇವಾಚ್ಯಾ – ಕೃಪಾ । ಘೃತಸ್ಯ – ವಿಭ್ರಾಷ್ಟಿಂ – ವಿ – ಭ್ರಾಷ್ಟಿಂ

೧ ೨೦ ೩ ೧ ೨ ೩ ೨ ೩ ೧ ೨ ೩
– ಅನು – ಶುಕ್ರಶೋಚಿಷಃ – ಶುಕ್ರ – ಶೋಚಿಷಃ । ಆಜುಹ್ವಾನಸ್ಯ – ಆ –

೧ ೨೦ ೩ ೧ ೨
ಜುಹ್ವಾನಸ್ಯ – ಸರ್ಪಿಷಃ ॥ *೯.೪೬೫ ॥*

ಭಾರದ್ವಾಜೇ ದ್ವೇ । ಭರದ್ವಾಜೋಽತ್ಯಷ್ಟಿರಗ್ನಿಃ ॥

೪೬೫.೧. ಅಗ್ನಿಂ ಹೋತಾ ॥ ರಮ್ಮನ್ಯೇಽಽಇದಾಸ್ವನ್ತಮ್ । ಓಽಇ
ವಾಽಇ । ವಾಸೋಃಸೂಽ೨ಇಳನೂಮ್ । ಸಹಸೋಜಾಽ
ಇತಾವೇಽ೧ದಾಸಾಽ೨ಮ್ । ವಿಪ್ರನ್ನಜಾ । ಓಽಇವಾಽಇ ।
ತವೇಽ೨ದಾಽ೨ಇಳಸಾಮ್ । ಯಊರ್ಧ್ವಾಽ೧ಯಾ
ಽ೨ । ಸುವಾಧ್ವಾಽ೧ರಾಽ೨: । ದೇವೋದೇವಾ । ಓಽಇವಾ
ಽಇ । ಚಿಯಾಽ೨ಕಾಽ೨ಇಳರ್ಪಾ । ಘೃತೋವಾ । ಸ್ಯವಿ
ಭ್ರಾಽ೨ಷ್ಟಿಮ್ । ಅನುಶುಕ್ರಶಾ । ಓಽಇವಾ । ಚಿಷಃ ॥
ಆಜುಹ್ವಾಽ೨ಇನಾ ॥ ಸ್ಯಸಾ । ಓಽಇವಾಽಇ । ಪಾಽ೨ಇಷಾ
ಽ೨ಇಳಔಹೋವಾ ॥ ಊಽ೨ಇಳಪಾ ॥

*ದೀ - ೧೩ । ಪ - ೨೩ । ಮಾ - ೧೦ । ಡ್ವಾ । ೩೮ । ೮೦೯ ॥*

೪೬೫.೨. ಅಗ್ನಿಂ ಹೋತಾರಂಮನ್ಯೇ । ದಾಽ೨ಇಳ । ಸ್ವನ್ತಂವ
ಸೋಃಸೂನುಮ್ ॥ ಸಹಸೋಜಾಽಇತಾವೇಽ೧ದಾಸಾ

ऽ२म् । विप्रन्नजाऽ३तावेऽ१दासाऽ२म् । य
ऊर्ध्वयाऽ३सूवध्वाराऽ२: । देवोदेवाऽ
३चायाऽ१कृपाऽ२ । घृतास्यविभ्राष्टिमनुशु ।
क्रशोऽ१चिषाऽ२: ॥ आजूह्वाऽ३नाऽ३ ॥ स्याऽ
२३साऽ३ । पाऽ३४५इषोऽ६हाइ ॥

दी - १६ । प - १२ । मा - ८ । ख्रै । ३८ । ८१० ॥

अवभृथसाम । बृहस्पतिरत्यष्टिरग्निः ॥

४६५.३. अहावोहाऽ२३४वाः । ३ । अग्निष्पती । प्रतिद
हती । अग्निं होः । तारम्माऽ३न्येऽ३दास्वन्त
म् ॥ वसोः । सूनुं सहसोजाऽ३ताऽ३वे
दसम् । विप्राम् । नजाऽ३ताऽ३वेदसम् ।
यऊ । र्ध्वयाऽ३सूऽ३वध्वरः ॥ देवो । दे
वाऽ३चीऽ३याकृपा ॥ घृता । स्यविभ्राष्टिमनु

೪ ೨ರ ೩ ೫ ೨ರ ೧ ೨ರ ೪ ೨
ಶೂ೨೩ಕ್ರಾ೨೩ಶೋ೬ಚಿಷಃ ॥ ಆಜೂ । ಹ್ವಾನಾ೨೩ಸ್ಯಾ೨೩ಸ

೩ ೫ ೩ ೨ ^ ೩ ೫ ೨೧
ರ್ಪಿಷಃ । ಅಹಾವೋ೬ಹಾ೨೨೩ಳವಾಃ । ೩ । ಅಗ್ನಿಷ್ಟಪ

೩ ೨ ೩ ೪ ೨ ೧ ೨ ೧
ತೀ೬ । ಪ್ರತಿದಹಾ೨೫ತಾ೨೬೫೬ಇ ॥ ಏ೨೩ । ವಿಶ್ವಂ ಸಮತ್ರಿ

೨ ೨ ೧ ೨ ೧ ೨ ೩
ಣನ್ದಹ । ೨-೨ । ಏ೨೩ । ವಿಶ್ವಂ ಸಮತ್ರಿಣನ್ದಹಾ೨೨

೧೧೧
೩೪೫ ॥

ದೀ - ೧೪ । ಪ - ೩೦ । ಮಾ - ೧೬ । ಸೂ । ೪೦ । ೮೧೧ ॥

ಪ್ರವರ್ಗ್ಯಸಾಮ । ಬೃಹಸ್ಪತಿರತ್ಯಷ್ಟಿರಗ್ನಿಃ ॥

೨ ^ ೩ ೨ ೩ ೪ ೫ ೨^ ೩ ೨೧
೪೬೫.೪. ತ್ಯಗ್ನಾ೩ಇಃ । ಪ್ರತಿದಹತೀ೬ । ಹಾಉಹೋ೬೨೫ಹಾಉ । ಅಗ್ನಿ

೨ರ ೪ ೨ರ ೩ ೫ ೨
ಂ ಹೋ೬ । ತಾರಮ್ಮಾ೨೩ನ್ಯೇ೬೨೩ದಾಸ್ವನ್ತಮ್ ॥ ವ

೧ ೨ರ ೦ ೪ ೨ರ ೩ ೫
ಸೋ೬ಃ । ಸೂನುಂ ಸಹಸೋ೬ಜಾ೨೩ತಾ೨೩ವೇ೬ದಸಮ್ ।

೨ ೧ ೨ ೪ ೨ರ ೩ ೫ ೨ ೧ ೨
ವಿಪ್ರಾಮ್ । ನಜಾ೨೩ತಾ೨೩ವೇ೬ದಸಮ್ । ಯಊ । ಧ್ವ

೪ ೨ ೩ ೫ ೨ರ ೧ ೨ರ ೪
ಯಾ೨೩ಸೂ೨೩ವಧ್ವರಃ । ದೇ೬ವೋ೬ । ದೇ೬ವಾ೨೩ಚೀ೬೨೩

೨ರ ೩ ೫ರ ೨ ೧ ೨ ೦ ೪
ಯಾಕೃಪಾ ॥ ಘೃತಾ । ಸ್ಯವಿಭ್ರಾಷ್ಟಿಮನುಶೂ೨೩ಕ್ರಾ೨೩

೨ರ ೩ ೫ ೨ರ ೧ ೨ರ ೪ ೨೩ ೫ ೨
ಶೋಽಚಿಷಃ ॥ ಆಜೂ । ಹ್ವಾನಾಽಇಸ್ಯಾಽಇಸರ್ಪಿಷಃ । ತ್ಯ

^ ೩ ೨೩ ೪೫ ೨ ^ ೫
ಗ್ನಾಇಃ । ಪ್ರತಿದಹತೀ । ಹಾಉಹೋಽಽಹಾಉ । ವಾ ॥

೨ ೧೨ ೧ ೨ ೧೨ ೧
ಏಽಇ । ವಿಶ್ವಳ್ಳ ಸಮತ್ರಿಣನ್ದಹ । ಏಽಇ । ವಿಶ್ವಂವ್ಯತ್ರಿಣ

೨ ೧೨೧ ೨೩ ೧೧೧
ನ್ದಹ । ಏಽಇ । ವಿಶ್ವನ್ಯತ್ರಿಣನ್ದಹಾಽ೨೩೪೫ ॥

*ದೀ - ೧೪ । ಪ - ೨೭ । ಮಾ - ೧೭ । ಥೇ । ೪೧ । ೮೧೨ ॥*

**ಅಗ್ನಿಂ** ಸರ್ವಾಸಾಂ ದೇವಸೇನಾನಾಮಗ್ರಗಣ್ಯಮ್ ಯಜ್ಞೇಷ್ವಗ್ರಂ ನೀಯಮಾನಂ ವಾ । **ಹೋತಾರಮ್** ಅಸ್ಮದ್ಯಾಗಂ ಪ್ರತಿ ದೇವಾನಾಮಾಹ್ವಾತಾರಮ್ । ಯದ್ವಾ । ಹೋಮ ನಿಷ್ಪಾದಕಂ ಹೋತಾರಂ ಜುಹೋತೇರ್ಹೋತೇತ್ಯೌರ್ಣವಾಭಃ - ೭.೧೫ - ಇತಿ ಯಾಸ್ಕ ವಚನಾತ್ । ಅಗ್ನಿಮದ್ಯ ಹೋತಾರಂ ವೃಣೀತೇತಿಶ್ರುತೇಃ । ಅಗ್ನಿಮಗ್ನ ಆವಹೇತಿ ಚ ಅಗ್ನಿರಾಹ್ವಾತೃತ್ವಂ ಪ್ರಸಿದ್ಧಮ್ । ಅಗ್ನಿಂ ಹೋತಾರಂ ಮನ್ಯೇ ಇತ್ಯೇವಂ ಪ್ರತಿವಿಶೇಷಣಂ ಮನ್ಯೇ ಇತಿ ಸಂಬಂಧಃ । ಯದ್ವಾ ಯಾಗ ನಿಷ್ಪತ್ತೇರೇವೋಪಲಕ್ಷಿತ ತ್ವಾದೇತದೇವ ವಿಧೇಯ ವಿಶೇಷಣಮ್ । ಇತರಾಣಿ ವಕ್ಷ್ಯಮಾಣ ವಿಶೇಷಣಾನಿ ಸ್ತುತಿಪರಾಣಿ **ದಾಸ್ವನ್ತಮ್** ಅತಿಶಯೇನ ದಾನವಂತಂ **ವಸೋಃ** ಪ್ರಶಸ್ಯಸ್ಯ ಸರ್ವೇಷಾಂ **ಸಹಸಃ ಸೂನುಮ್** ಬಲಸ್ಯ ಪುತ್ರಮಗ್ನಿಂ ಮಂಥನ ಕಾಲೇ ಬಲೇನ ಮಥ್ಯಮಾನ ಉತ್ಪದ್ಯತ ಇತಿ ತತ್ಪುತ್ರತ್ವಮುಪಚರ್ಯತೇ । **ಜಾತವೇದಸಂ** ಜಾತಾನಾಂ ವೇದಿತಾರಂ ಜಾತಪ್ರಜ್ಞಂ ಜಾತಧನಂ ವಾ ಜಾತವೇದಃ ಶಬ್ದೋ ಯಾಸ್ಕೇನ ಬಹುಧಾ ನಿರುಕ್ತಃ ಅಗ್ನೇರ್ಜಾತವೇದಸ್ತ್ವೇ ದೃಷ್ಟಾನ್ತಃ **ವಿಪ್ರಂ** ನ ಜಾತವೇದಙ್ಙಾತ ವಿದ್ಯಂ ಮೇಧಾವಿನಂ ಬ್ರಾಹ್ಮಣಮಿವ ತಂ ಯಥಾ ಬಹು

ಮನ್ಯತೇ ತಥಾ ತ್ವಾಮಪಿ ಸ್ತೌಮೀತ್ಯರ್ಥಃ । ಉಕ್ತ ಗುಣ ವಿಶಿಷ್ಟೋ ಯೋ ದೇವಃ **ಸ್ವಧ್ವರಃ** ಶೋಭನ ಯಜ್ಞವಾನ್ ಯಜ್ಞಂ ಸಮ್ಯಕ್ ನಿರ್ವಹನ್ । **ಊರ್ಧ್ವಯಾ** ಉನ್ನತಯಾ ಉತ್ಕೃಷ್ಟ್ಯಾ **ದೇವಾಚ್ಯಾ** ದೇವಾನ್ ಪೂಜಯನ್ತ್ಯಾ ದೇವಾನ್ ಪ್ರತ್ಯುಕ್ತಯಾ ವಾ **ಕೃಪಾ** ಕೃಪಯಾ ಸಾಮರ್ಥ್ಯ ಲಕ್ಷಣಯಾ ದೇವಾನ್ ಪ್ರಯುಕ್ತಯಾ ಕೃಪೇತಿ - ೬.೮ - ಯಾಸ್ಕಃ । ತೇಭ್ಯೋ ಹವಿರ್ವಹನ ಬುಧ್ಯಾ ಯುಕ್ತಃ ಸನ್ **ಶುಕ್ರಶೋಚಿಷಃ** ದೀಪ್ತ ತೇಜಸ್ಕಸ್ಯ **ಆಜುಹ್ವಾನಸ್ಯ** ಆ ಸಮನ್ತಾತ್ ಹೂಯಮಾನಸ್ಯ **ಸರ್ಪಿಷಃ** ಸರಣಶೀಲಸ್ಯ ಘೃತಸ್ಯ ವಿಲಾಪನೇನ ದೀಪ್ತಸ್ಯಾಜ್ಯಸ್ಯ **ವಿಭ್ರಾಷ್ಟಿಂ** ವಿಶೇಷೇಣ ಭ್ರಾಜಮನು ಸ್ವಯಮಪಿ ತದಾಜ್ಯಂ **ವಷ್ಟಿ** ಕಾಮಯತೇ ಸ್ವೀಕರೋತೀತ್ಯರ್ಥಃ । ವಸೋಃ ವಸುಮ್ ಇತಿ ಸಾಮ್ನ ಋಚಃ ಪಾಠೌ ॥

ಜಾತವೇದಾಃ ಕಸ್ಮಾತ್ । ಜಾತಾನಿ ವೇದ ಜಾತಾನಿ ವೈನಂ ವಿದುಃ ಜಾತೇ ಜಾತೇ ವಿದ್ಯತ ಇತಿ ವಾ । ಜಾತವಿತ್ತೋ ವಾಜಾತಧನೋ ಜಾತವಿದ್ಯೋ ವಾ । ಜಾತಪ್ರಜ್ಞಾನೋ ಯತ್ತಜ್ಜಾತಃ ಪಶೂನ ವಿನ್ದತೇತಿ ತಜ್ಜಾತವೇದಸೋ ಜಾತ ವೇದಸ್ತ್ವಮಿತಿ ಬ್ರಾಹ್ಮಣಮ್ । ತಸ್ಮಾತ್ ಸರ್ವಾನ್ ಋತೂನ್ ಪಶವೋಽಗ್ನಿಮಭಿ ಸರ್ಪನ್ತೀತಿ ಚ ಇತ್ಯಾದಿ - ನಿ.೭.೯ ॥ ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರೂಪ್ಯತೇ ಅಯಮೇವಸೋಽಗ್ನಿರ್ಜಾತವೇದಾ । ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇತ ನಾಮಧೇಯೇನ ಭಜೇತೇ ಇತ್ಯಾದಿ ಚ - ನಿ.೭.೨೦ ॥

**ಸ್ವಧ್ವರಃ** ಯಜ್ಞಕ್ಕೆ ಭೂಷಣವಾಗಿ ಯಜ್ಞವನ್ನು ಅಚ್ಚುಕಟ್ಟಾಗಿ ನಿರ್ವಹಿಸುವ, **ಊರ್ಧ್ವಯಾ** ಮೇಲೆ ಮೇಲಕ್ಕೇರುವ ಉತ್ಕೃಷ್ಟವಾದ, **ದೇವಾಚ್ಯಾ** ದೇವತೆಗಳನ್ನು ಗೌರವಿಸಿ ಪೂಜಿಸುವ, **ಕೃಪಾ** ಹವಿಸ್ಸುಗಳನ್ನು ಒಯ್ಯುವ ಸಾಮರ್ಥ್ಯದ ಅತಿಶಯ ಕೃಪೆಯಿಂದಾಗಿ, **ಶುಕ್ರ ಶೋಚಿಷಃ** ಅತಿಶಯ ತೇಜಸ್ಸಿನಿಂದ

ಬೆಳಗುವ, ವಿಭ್ರಾಷ್ಟಿಂ ಅನು ಜ್ವಾಲೆಯನ್ನನುಸರಿಸಿ, ಆಜುಹ್ವಾನಸ್ಯ ಸರ್ವತ್ರ ಹೋಮ ಮಾಡುವ, ಆಹ್ವಾನಿಸಿ ಅರ್ಪಿಸುವ, ಸರ್ಪಿಷಃ ಘೃತಸ್ಯ ದ್ರವರೂಪ ವಾದ ತುಪ್ಪವನ್ನು ಸ್ವೀಕರಿಸುವ, ಅಗ್ನಿಂ ದೇವತೆಗಳ ಮುಂದಾಳಾಗಿರುವ ಅಗ್ನಿಯನ್ನು, ಹೋತಾರಂ ಯಜ್ಞಕ್ಕೆ ದೇವತೆಗಳನ್ನು ಆಹ್ವಾನಿಸುವವನೆಂದೂ ನಮ್ಮ ಯಜ್ಞದ ಹೋತೃವೆಂದೂ, ದಾಸ್ವನ್ತಂ ಅತಿಶಯವಾಗಿ ದಾನ ಮಾಡುವವ ನೆಂದೂ, ವಸೋಃ ಎಲ್ಲರಿಗೂ ವಾಸಿಸಲು ವಸತಿಯನ್ನು ಮಾಡಿಕೊಡುವವ ನೆಂದೂ, ಸಹಸಃ ಸೂನುಂ ಸಾಹಸಿಯೂ ಬಲಶಾಲಿಯೂ ಆದ ಪುತ್ರನೆಂದೂ, ಜಾತವೇದಸಂ ವಿಪ್ರಂ ನ ಸಕಲ ವಿದ್ಯಾ ಪರಿಣತನಾದ ಮೇಧಾವಿಯಾದ ಬ್ರಾಹ್ಮಣನಂತೆ, ಜಾತವೇದಸಂ ಸೃಷ್ಟಿಯಾಗಿರುವುದನ್ನೆಲ್ಲಾ ಬಲ್ಲವನೆಂದೂ, ಮನ್ಯೇ ತಿಳಿದು ಸ್ತುತಿಸುತ್ತೇನೆ.

ಯಜ್ಞಕ್ಕೆ ಭೂಷಣವಾಗಿ ತನ್ನ ಉತ್ಕೃಷ್ಟವಾದ ಸಾಮರ್ಥ್ಯದಿಂದ ದೇವತೆ ಗಳಿಗೆ ಹವಿಸ್ಸನ್ನು ತಲುಪಿಸಿ ಆಹ್ವಾನಿಸುವ ಪೂಜಿಸುವ ಯಜ್ಞದಲ್ಲಿ ಅರ್ಪಿಸುವ ಆಜ್ಯವನ್ನು ತನ್ನ ತೇಜೋಮಯ ಜ್ವಾಲೆಗಳಿಂದ ಸ್ವೀಕರಿಸುವ ಅಗ್ನಿಭಗವಂತ ನನ್ನು ನಾವು ನೆರವೇರಿಸುವ ಯಜ್ಞಕ್ಕೆ ಹೋತೃವನ್ನಾಗಿಯೂ ದಾನಶೀಲನನ್ನಾಗಿ ಯೂ ಸರ್ವರ ನಿವಾಸಕ್ಕೆ ಕಾರಣನನ್ನಾಗಿಯೂ ಸಮಸ್ತ ವಿದ್ಯಾಪರಿಣತನಾದ ಮೇಧಾವಿ ಬ್ರಾಹ್ಮಣನನ್ನಾಗಿಯೂ ತಿಳಿದು ಸ್ತುತಿಸುತ್ತೇನೆ.

ಸವನಸುಕೃತಿ ಭೂಷಂ ಹವ್ಯದಿಂ ದೇವಪ್ರೋಷಂ
ಪಡೆಯುತೆ ರುಚಿರಮ್ಯಜ್ವಾಲೆಯಿಂದಾಜ್ಯಭಾಗಂ ।
ಮೆರೆವನನಲದೇವಂ ಹೋತ್ರರೂಪಿಂದೆ ನಮ್ಮೀ
ಯಜನದೆ ಮತಿಮಂತಂ ದಾನಿದಲ್; ವಂದ್ಯನಾತಂ ॥

# ಋಕ್ - ೪೬೬

ಗೃತ್ಸಮದಃ ಶೌನಕಃ । ಅಷ್ಟಿಃ ಅತಿಶಕ್ವರೀವಾ ಇನ್ದ್ರಃ ॥

೨ ೩ ೧ ೨ರ ೩ ೧ ೨ ೩ ೨ ೩ ೨ ೩ ೨
ತವ ತ್ಯನ್ನರ್ಯಂ ನೃತೋಽಪ ಇನ್ದ್ರ ಪ್ರಥಮಂ ಪೂರ್ವ್ಯಂ ದಿವಿ

೩ ೧ ೨ ೩ ೨
ಪ್ರವಾಚ್ಯಂ ಕೃತಮ್ ।

೨ ೩ ೨ ೩ ೧ ೨ ೩ ೧ ೨ ೩ ೧ ೨ ೩ ೨ ೩ ೨ ೨ ೩ ೧ ೨ ೩ ೧
ಯೋ ದೇವಸ್ಯ ಶವಸಾ ಪ್ರಾರಿಣಾ ಅಸುರಿಣನ್ನಪಃ । ಭುವೋ ವಿಶ್ವಮಭ್ಯ

೨ ೩ ೧ ೨ ೩ ೧ ೨ರ ೩ ೧ ೨ ೩ ೧ ೨ರ
ದೇವಮೋಜಸಾ ವಿದೇದೂರ್ಜಂ ಶತಕ್ರತುರ್ವಿದೇದಿಷಮ್ ॥

ಸ್ವ - ೨೩ / ಉ - ೬ / ಧಾ - ೧೦೧ / ಟ / ದ - ೮ //

೧ ೨ರ ೧ ೨ರ ೩ ೧ ೨ರ ೩ ೨ ೩ ೨
ತವ - ತ್ಯತ್ - ನರ್ಯಂ - ನೃತೋ - ಅಪಃ - ಇನ್ದ್ರ । ಪ್ರಥಮಂ - ಪೂರ್ವ್ಯಂ -

೩ ೨ ೩ ೧ ೨ ೩ ೨ರ ೩ ೨ ೩ ೧ ೨ ೧ ೨ರ
ದಿವಿ - ಪ್ರವಾಚ್ಯಂ - ಪ್ರ - ವಾಚ್ಯಂ - ಕೃತಮ್ । ಯಃ - ದೇವಸ್ಯ - ಶವಸಾ -

೧ ೨ರ ೩ ೧ ೨ರ ೧ ೨ರ ೩ ೨ ೩ ೨ ೧ ೨ರ ೧ ೨ರ
ಪ್ರಾರಿಣಾಃ - ಪ್ರ - ಆರಿಣಾಃ - ಅಸು - ರಿಣನ್ - ಅಪಃ ॥ ಭುವಃ - ವಿಶ್ವಂ -

೩ ೨ ೧ ೨ರ ೩ ೧ ೨ರ ೩ ೨ ೧ ೨ರ ೩ ೧ ೨
ಅಭಿ - ಅದೇವಂ - ಅ - ದೇವಂ - ಓಜಸಾ । ವಿದೇತ್ - ಊರ್ಜಂ - ಶತಕ್ರತುಃ

೩ ೨ ೩ ೨ ೧ ೨ರ
- ಶತ - ಕ್ರತುಃ - ವಿದೇತ್ - ಇಷಮ್ ॥ ೧೦.೪೬೬ //

ಆ - ೯೫ / ಅ - ೪೩ / ಪ - ೩೨೮ / ವೈ / ದ - ೮ //

*ಇತಿ ಅಷ್ಟಮೀ ದಶತಿಃ ॥೮॥ ದ್ವಾದಶಃ ಖಣ್ಡಃ ॥೧೨॥*

*ಇತ್ಯೈನ್ದ್ರಂ ಪರ್ವಮ್ ಕಾಣ್ಡಮ್ ವಾ ಸಮಾಪ್ತಮ್ ॥*

*ಇತಿ ಚತುರ್ಥೋಽಧ್ಯಾಯಃ ॥*

ಏಷಮ್ । ಇಷೋಽಷ್ಟಿರಿನ್ದ್ರಃ ॥

೧ ೪ ೨೧ —
೪೬೬.೧. ತಾಽ೨ಇ೪ವತ್ಯನ್ನಾಽ೫ರಿಯನ್ನ್ವತಾಉ ॥ ಅಪಇನ್ನಾಽ೨ ।
೧ ^ ೩ ೨ ೩ ೫ ೩ ೨೦ ೩ ೨ ೩ ೫
ಪ್ರಥಮಂಪೂಽ೨ । ರ್ವಿಯಂದಿವಿ । ಪ್ರವಾ । ಚಿಯಂಕೃತ -
೨೦ ೧೦ — ೧ ^ ೩ ೨೦
ಮ್ । ಯೋಽದೇವಾಸ್ಯಾಽ೨ । ಶವಸಾಪ್ರಾಽ೨ । ರಿಣಾ
೩ ೫ ೩ ೨ ೩ ೫ ೨ ೧೦ — ೧ ^
ಅಸು । ರಿಣನ್ನಪಃ । ಭುವೋಽವಿಶ್ವಾಽ೨ಮ್ । ಅಭ್ಯದಾಽ೨
೩ ೨೦ ೩ ೫೦ ೩ ೨೦ ೩೦ ೫ ೩ ೨^ ೩
ಇ । ವಮೋಽಜಸಾ । ವಿದೇಽದೂರ್ಜಮ್ ॥ ಶತಾಕ್ರಾಽ೨ಇ
೫ ೪
೪ತೂಃ ॥ ಫಿದಾಽ೫ಇದಿಷಾಉ ॥ ವಾ ॥

*ದೀ - ೯ । ಪ - ೧೭ । ಮಾ - ೧೧ । ಥ । ೪೨ । ೮೧೩ ॥*

*ಷೋಡಶ ನವಮಃ ॥ ದ್ವಾದಶಃ ಖಣ್ಡಃ ॥೧೨॥ ದಶತಿಃ ॥೮॥*

*ಇತಿ ಗ್ರಾಮೇಗೇಯಗಾನೇ ದ್ವಾದಶಸ್ಯಾರ್ದ್ಧಃ ಪ್ರಪಾಠಕಃ ॥*

*ಇತಿ ಐನ್ದ್ರಾಖ್ಯೇ ತೃತೀಯೇ ಗಾನೇ ಇನ್ದ್ರಪುಚ್ಛಾಖ್ಯಂ ಸಪ್ತಮಂ ತನ್ತ್ರಂ ಸಮಾಪ್ತಮ್ ॥*

*ಇತ್ಯೈನ್ದ್ರಂ ಪರ್ವಮ್ ಐನ್ದ್ರಂ ಕಾಣ್ಡಮ್ ವಾ ಸಮಾಪ್ತಮ್ ॥*

*ಇತಿ ಚತುರ್ಥೋಽಧ್ಯಾಯಃ ॥*

**ನೃತಃ** ಸರ್ವೇಷಾಂ ನರ್ತಯಿತಃ ಪ್ರವರ್ತಯಿತಃ । ಹೇ ಇನ್ದ್ರ! **ನರ್ಯಂ** ನರಾಣಾಂ ಹಿತಕರಮ್ । **ಪ್ರಥಮಂ** ಪ್ರತಮಂ ಪ್ರಥಮಂ ಪ್ರತಮಂ ಇತಿಯಾಸ್ಕಃ **ಪೂರ್ವ್ಯಂ** ಪೂರ್ವಕಾಲಭವಂ ತ್ವಯಾ ಕೃತಂ **ತವ ತ್ಯದ್** ತದಪಃ ಕರ್ಮ **ದಿವಿ** ಸ್ವರ್ಗಲೋಕೇ **ಪ್ರವಾಚ್ಯಂ** ದೇವೈಃ ಪ್ರಕರ್ಷೇಣ ವಕ್ತವ್ಯಂ ಶ್ಲಾಘನೀಯಮಿತ್ಯರ್ಥಃ । ಕಿಂ ತತ್? **ದೇವಸ್ಯ** ವಿಜಿಗೀಷೋಃ **ಅಸುರಸ್ಯ ಅಸು** ಅಸುಂ ಪ್ರಾಣಂ **ರಿಣನ್** ಹಿಂಸನ್ **ತ್ವಮ್ ಅಪಃ** ಉದಕಾನಿ ತೇನ ನಿರುದ್ಧಾನಿ **ಅರಿಣಃ** ಪ್ರೈರಯ । ಇತಿ ಯದೇತತ್ ಕರ್ಮ ತತ್ ಪ್ರವಾಚ್ಯಮಿತಿ ಸಮನ್ವಯಃ । ಪರೋಕ್ಷ ನಿರ್ದೇಶ ವಿಶಿಷ್ಟಃ **ಸಃ** ಇನ್ದ್ರಃ **ವಿಶ್ವಂ** ವ್ಯಾಪ್ತಮ್ **ಅದೇವಂ** ತಮೋರೂಪಂ **ಅಸುರಮ್ ಓಜಸಾ** ಬಲೇನ **ಅಭಿ ಭುವತ್** ಅಭಿಭವತು । ಕಿಂಚ **ಶತಕ್ರತುಃ** ಇನ್ದ್ರಃ **ಊರ್ಜಮ್** ಬಲಂ **ವಿದೇತ್** ಲಮ್ಭ್ಯೇತ್ **ಇಷಂ** ಹವಿರ್ಲಕ್ಷಣಮನ್ನಂ ಚ ವಿದೇತ್ ವಿದ್ಲೃ ಲಾಭೇ - ತು. ಉ ॥ ಯೋ ಯದ್ ಇತಿ ವಿದೇದ್ - ವಿದಾ ಇತಿ ಚ ಸಾಮ್ನ ಋಚಃ ಪಾಠೌ ॥

**ವೇದಾರ್ಥಸ್ಯ ಪ್ರಕಾಶೇನ ತಮೋಹಾರ್ದ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾ ತೀರ್ಥ ಮಹೇಶ್ವರಃ ॥**

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕ ಮಾರ್ಗ ಪ್ರವರ್ತಕ ಶ್ರೀ ವೀರಬುಕ್ಕಭೂಪಾಲ ಸಾಮ್ರಾಜ್ಯ ಧುರನ್ಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ಸಾಮವೇದಾರ್ಥ ಪ್ರಕಾಶೇ ಛನ್ದೋ ವ್ಯಾಖ್ಯಾನೇ ದ್ವಾದಶಃ ಖಣ್ಡಃ ॥ ಸಮಾಪ್ತಶ್ಚ ಚತುರ್ಥೋಽಧ್ಯಾಯಃ ॥

***ಐನ್ದ್ರಮ್ ಪರ್ವ ಐನ್ದ್ರಕಾಣ್ಡಂವಾ ಸಮಾಪ್ತಮ್ ॥***

***ಇತಿ ದ್ವಿತೀಯಮ್ ಪರ್ವ ॥***

ನೃತ್ತ: ಹರ್ಷದಿಂದ ಎಲ್ಲರನ್ನೂ ನಲಿಯುವಂತೆ ಮಾಡುವ ಎಲ್ಲರನ್ನೂ ಕುಣಿಸುವ ಅಥವಾ ಪ್ರೇರಿಸುವ ಮುಂದಾಳು ನೇತಾರ, ಇನ್ದ್ರ ಪರಮೈಶ್ವರ್ಯ ಶಾಲಿಯಾದ ಇನ್ದ್ರಭಗವಂತನೇ, ದೇವಸ್ಯ ದೇವತೆಗಳನ್ನು ಜಯಿಸ ಬೇಕೆಂದಿದ್ದ, ಅಸುಂ ಪ್ರಾಣವನ್ನು, ಯತ್ ನಿನ್ನ ಮಹಿಮೆಯ, ಶವಸಾ ಬಲಶಕ್ತಿಸಾಹಸ ಗಳಿಂದ, ರಿಣನ್ ಹಿಂಸಿಸುತ್ತಾ, ಅಪಃ ಅವರುಗಳಿಂದ ತಡೆ ಹಿಡಿಯಲ್ಪಟ್ಟಿದ್ದ ನೀರನ್ನು, ಪ್ರಾರಿಣಾಃ ಪ್ರವಹಿಸುವಂತೆ ಮಾಡಿದ್ದು, ನರ್ಯಮ್ ಮನುಷ್ಯ ಮಾತ್ರರಿಗೆ ಹಿತಕರವಾದುದೂ, ಪ್ರಥಮಃ ಶ್ರೇಷ್ಠವಾದುದೂ, ಪೂರ್ವ್ಯಂ ಅತ್ಯಂತ ಪ್ರಾಚೀನವಾದುದೂ ಸನಾತನವಾದುದೂ, ತವ ಕೃತಂ ನಿನ್ನಿಂದ ನೆರವೇರಿಸಲ್ಪಟ್ಟದ್ದೂ, ತ್ಯತ್ ಅಪಃ ಪ್ರಸಿದ್ಧವಾದುದೂ ಆದ ಆ ಕರ್ಮವು, ದಿವಿ ಸ್ವರ್ಗಲೋಕದಲ್ಲಿ, ಪ್ರವಾಚ್ಯಮ್ ಪ್ರವಚನೀಯ ಗುಣಗಳಿಂದ ಅತಿಶಯವಾಗಿ ಪ್ರಶಂಸಿಸತಕ್ಕದ್ದಾಗಿದೆ, ಶತಕ್ರತುಃ ಇಂತಹ ನೂರಾರು ಕರ್ಮಗಳನ್ನು ನೆರವೇರಿ ಸುವ ಇನ್ದ್ರ ಭಗವಂತನು, ವಿಶ್ವಂ ಪ್ರಪಂಚವನ್ನೆಲ್ಲಾ ವ್ಯಾಪಿಸಿರುವ, ಅದೇವಂ ಪ್ರಕಾಶವಿಲ್ಲದ, ತಮೋರೂಪದ ಅಂಧಕಾರವೆಂಬ ಅಸುರನನ್ನು, ಓಜಸಾ ತನ್ನ ಆತ್ಮಬಲದಿಂದ, ಅಭಿಭುವತ್ ಪರಾಜಯಗೊಳಿಸಲಿ, ಊರ್ಜಂ ರಸವನ್ನೂ ಬಲವನ್ನೂ ಶಕ್ತಿಯನ್ನೂ, ವಿದೇತ್ ಪಡೆದುಕೊಳ್ಳಲಿ, ಇಷಮ್ ಅನ್ನಸಂಕೇತ ವಾದ ಹವಿಸ್ಸನ್ನು, ವಿದೇತ್ ಪಡೆದುಕೊಳ್ಳಲಿ.

ಹರ್ಷದಿಂದ ಎಲ್ಲರನ್ನೂ ನಲಿಯುವಂತೆ ಮಾಡುವ, ಕುಣಿಸುವ ಪ್ರೇರಿ ಸುವ ಮುಂದಾಳಾದ ಇನ್ದ್ರಭಗವಂತನೇ ದೇವತೆಗಳನ್ನು ಜಯಿಸಬೇಕೆಂದಿದ್ದ ಅಸುರನ ಪ್ರಾಣವನ್ನು ನಿನ್ನ ಬಲಶಕ್ತಿ ಸಾಹಸ ಮಹಿಮೆಗಳಿಂದ ಹಿಂಸಿಸಿ ಅವರು ತಡೆಹಿಡಿದಿದ್ದ ನೀರನ್ನು ಪ್ರವಹಿಸುವಂತೆ ಮಾಡಿದ್ದು ಮನುಷ್ಯಮಾತ್ರರಿಗೆ ಹಿತಕರವಾದುದೂ ಶ್ರೇಷ್ಠವಾದುದೂ ಪ್ರಾಚೀನವಾದುದೂ ಸನಾತನವಾದು ದೂ ಆದ ಪ್ರಸಿದ್ಧ ಕರ್ಮವಾಗಿದೆ. ಸ್ವರ್ಗಲೋಕದಲ್ಲಿ ಅತಿಶಯವಾಗಿ ಹೊಗಳು ವುದಕ್ಕೆ ತಕ್ಕುದಾಗಿದೆ. ಇಂತಹ ನೂರಾರು ಕರ್ಮಗಳನ್ನು ನೆರವೇರಿಸುವ ಇನ್ದ್ರ ಭಗವಂತನು ವಿಶ್ವವ್ಯಾಪಿಯಾಗಿಯೂ ತಮೋರೂಪಿಯೂ ಆಗಿರುವ ಪ್ರಕಾಶ

ವಿಲ್ಲದ ಅಸುರನನ್ನು ತನ್ನ ಬಲದಿಂದ ಪರಾಜಿತಗೊಳಿಸಲಿ ಬಲವನ್ನೂ ಶಕ್ತಿ ಸಾಮರ್ಥ್ಯಗಳನ್ನೂ ಹವಿಸ್ಸನ್ನೂ ಪಡೆಯಲಿ.

ಸಮಸ್ತಜನನರ್ತನಂ ರಸವಿರೋಧಿವೈಕರ್ತನಂ
ಪ್ರಶಂಸಿತಸನಾತನಂ ನಿಜಕೃತಿಸ್ಫುರಚ್ಚೇತನಂ ।
ಸುರಾಲಯಪರಾಯಣಂ ಸಕಲವೇದನಾರಾಯಣಂ
ಶತಕ್ರತು, ತಮೋರಣಂ ಮಧುರಜೀವನೋದ್ಧಾರಣಂ ॥

*ಪ್ರಕೃತಿ ಗಾನದಲ್ಲಿ ಐನ್ದ್ರಪರ್ವ/ ಕಾಣ್ಡ ಮುಗಿದಿದೆ.*

*ನಾಲ್ಕನೆಯ ಅಧ್ಯಾಯ ಮುಗಿದಿದೆ.*

# ಇನ್ದ್ರನ ವೈಭವ

ತೃತೀಯಂ ಐನ್ದ್ರಗಾನಂ ಎಂದೆನಿಸಿರುವ ಈ ಐನ್ದ್ರಕಾಂಡ ಅಥವಾ ಪರ್ವವು ಮೂರು ಅಧ್ಯಾಯಗಳಲ್ಲಿ ವಿಭಕ್ತವಾಗಿರುವ ೧೧೫ ರಿಂದ ೪೬೬ ರವರೆಗಿನ ೩೫೨ ಋಕ್ ಮನ್ತ್ರಗಳಿಂದ ಉದಯವಾಗಿರುವ ೬೩೩ ಸಾಮ ಗಾನಗಳನ್ನೊಳ ಗೊಂಡಿದೆ. ಈ ಭಾಗದಲ್ಲಿ ಅಗ್ನಿ ಮರುತ್ ಆದಿ ಅನ್ಯ ದೇವತಾ ಸಂಬಂಧವ ಕೆಲವು ಮನ್ತ್ರಗಳು ಅಲ್ಲಲ್ಲೇ ಇದ್ದರೂ ಸಹ ಇನ್ದ್ರನ ಶಕ್ತಿ ಸಾಮರ್ಥ್ಯ ಪರಾಕ್ರಮ ಐಶ್ವರ್ಯ ಉದಾರತೆ ಆದಿ ಗುಣಗಣಗಳ ವರ್ಣನೆಯೇ ಪ್ರಧಾನ ವಾಗಿರುವ ಇನ್ದ್ರದೇವತಾ ಪರವಾದ ಮನ್ತ್ರಗಳ ಬಾಹುಲ್ಯದಿಂದ ಈ ಹೆಸರು ಸಾರ್ಥಕವಾಗಿದೆ.

ದೃಶ್ಯಾದೃಶ್ಯ ಪ್ರಪಂಚದೆಲ್ಲದರೊಳಗೂ ಅಂತಸ್ಥವಾಗಿ ಜೀವರೂಪ ದಿಂದಿರುವ ಬ್ರಹ್ಮವನ್ನು 'ಇದಮ್' ಇದು. ಈ ಪ್ರಕಾರವಾಗಿ, ಅಪರೋಕ್ಷ ರೂಪವಾಗಿ, ಸಾಕ್ಷಾತ್ಕಾರವಾದುದರಿಂದ ಇದಿನ್ದ್ರ ಎಂದು ಪ್ರಸಿದ್ಧವಾಯಿತು. ಪರೋಕ್ಷ ಪ್ರಿಯರಾದ ದೇವತೆಗಳೂ ಬ್ರಹ್ಮವೇತ್ತರೂ ಇದನ್ನು ಇನ್ದ್ರ ಎಂಬ ಹೆಸರಿನಿಂದ ವ್ಯವಹರಿಸಿದರು - ಐ. ಉ. ೧. ೩. ೧೪ ॥ **ಇರಾ+ದೃಣಾತಿ ಇರಾ=** ಅನ್ನ, ದೃ= ಸೀಳುವುದು. ಮೇಘವನ್ನು ವಜ್ರಾಯುಧದಿಂದ ಸೀಳಿ ಮಳೆಸುರಿಸಿ, ನೇಗಿಲಿ

ನಿಂದ ಭೂಮಿಯನ್ನು ಸೀಳಿ ಸಸ್ಯೋತ್ಪಾದನೆಗಾಗಿ, ಇರಾ ಬತ್ತ ಗೋಧಿ ಆದಿ ಸಸ್ಯ ಬೀಜಗಳನ್ನು ಅಂಕುರೋದ್ಭೇದದಿಂದ ವಿಕಾಸಗೊಳಿಸಿ ಮಳೆಯಿಂದ, ದಾ ಪೋಷಿಸುವವನಾದುದರಿಂದ ಇನ್ದ್ರ, ಇನ್ದು ಸೋಮರಸಪಾನಮಾಡಲು, ದ್ರವತಿ ಧಾವಿಸಿ ಬರುವವನಾದುದರಿಂದ ಇನ್ದ್ರ, ಇನ್ದು ಸೋಮಪಾನದಿಂದ, ರಮಃ ರಮಿಸುವವನು, ಇನ್ದ್ರ ಇಞ ಇನ್ಧೀ ದೀಪ್ತೌ ಅನ್ನೋತ್ಪಾದನೆ ಮಾಡುವುದರಿಂದ ಅಧಿದೈವಸ್ಥನೂ ಅಧ್ಯಾತ್ಮಸ್ಥನೂ ಆಗಿ ಪ್ರಾಣಿಗಳಿಗೆ ಅನ್ನವನ್ನುಣಿಸುತ್ತಾ ಬೆಳಗು ತ್ತಾ ಪ್ರೇರಿಸುತ್ತನಾಗಿ, ಇನ್ದ್ರ. ಇನ್ಧಃ ಶರೀರ ಮಧ್ಯದಲ್ಲಿರುವ ಇವನನ್ನು ಪ್ರಾಣಾಧಿದೇವತೆಗಳು ಪ್ರಾಣಭಾವದಿಂದ ಪ್ರಕಾಶಪಡಿಸುವುದರಿಂದ ಇನ್ದ್ರ. ಇದಂದರ್ಶೀ ಇವನೇ ಎಲ್ಲವನ್ನೂ ನೋಡಿರುವುದರಿಂದ ಇನ್ದ್ರ. ಇದಂ+ಕೃ= ಇದಂ ಕರಃ ಇವನೇ ಎಲ್ಲವನ್ನೂ ಮಾಡಿರುವುದರಿಂದ ಇನ್ದ್ರ. ಇದಿ - ಪರಮೈಶ್ವ ರ್ಯೇ+ಶತೃಪ್ರತ್ಯಯ - ಪರಮೈಶ್ವರ್ಯಶಾಲಿ ಇನ್ದ್ರ.

ಇನ್ದ್ - ಇದಂ ಕರಣ ಎಂದರೆ ಪರಮಾತ್ಮನರೂಪದಿಂದ ಈ ಜಗತ್ತನ್ನು ನಿರ್ಮಾಣ ಮಾಡುತ್ತಿರುವ ಜಗದ್ರೂಪವಾಗಿರುವ. ಇನ ಈಶ್ವರವಾಚಕ ಶಬ್ದ, ದೃ ಭಯ, ಶತ್ರುಗಳಿಗೆ ಭಯವನ್ನುಂಟುಮಾಡುವ ಸಾಮರ್ಥ್ಯಶಾಲಿಯಾದವನು. ಇನ್ದ್ರ ಇನ್ದದಾದರ. ಯಜ್ಞಯಾಗ ಮಾಡುವವನು. ಅತಿಶಯವಾಗಿ ಆದರಿಸಲ್ಪ ಡುವವನು ಇನ್ದ್ರ - ನಿರು.೧೦.೮ ॥ ಮನಸ್ಸು ಮತ್ತು ವಾಕ್‌ನಿಂದ ಉದಯ ವಾಗುವ ಸ್ವರವೂ ಇನ್ದ್ರನೇ - ಸಯೋ ಮನಸಶ್ಚ ವಾಚಶ್ಚ ಸ್ವರೋ ಜಾಯತೇ ಸ ಇನ್ದ್ರಃ - ಜೈ.ಬ್ರಾ. ೧.೩೨೧ ॥ ಇನ್ದ್ರನು ವಾಯ್ವಾತ್ಮಕನಾಗಿಯೇ ಸಕಲ ದಿಕ್ಕುಗಳಲ್ಲಿರುವ ನೀರನ್ನು ಸೆಳೆಯುತ್ತಾ ಮರಗಿಡಬಳ್ಳಿಗಳನ್ನೂ ಜಲಾಶಯ ಗಳನ್ನೂ ಒಣಗಿಸುತ್ತಾನೆ. ಅನ್ತರಿಕ್ಷಲೋಕದ ಉದಕವನ್ನು ಅಧಿಕಗೊಳಿಸುತ್ತಾ ಮಳೆ ಸುರಿಸುತ್ತಾನೆ - ನಿರು.೧೦.೨ ॥ ಸ್ವರ್ಗಲೋಕಕ್ಕೂ ಪೃಥ್ವಿಗೂ ಮೇಘಗಳಿಗೂ ಜಲಕ್ಕೂ ಮೇಧಾವಿಗಳಿಗೂ ಜ್ಞಾನಿಗಳಿಗೂ ಸಂಪಾದಿಸಿರುವ ಹಾಗೂ ಸಂಪಾದಿಸದಿರುವ ಸಮಸ್ತ ಐಶ್ವರ್ಯಕ್ಕೂ ಇನ್ದ್ರನೇ ಪ್ರಭುವಾಗಿದ್ದಾನೆ. ಯಜ್ಞಕಾಲದಲ್ಲಿ ಉದ್ಗಾತೃ ಆದಿ ಸಾಮಗಾಯಕರು ಬೃಹತ್ಸಾಮಾದಿಗಳಿಂದಲೂ ಹೋತೃಗಳು ಋಗ್ವೇದದ ಶಸ್ತ್ರಮನ್ತ್ರಗಳಿಂದಲೂ ಅಧ್ವರ್ಯುಗಳು ಯಜುಸ್ಸು

ಗಳಿಂದಲೂ ಇನ್ದ್ರನನ್ನು ಬಗೆಬಗೆಯಾಗಿ ಸ್ತುತಿಸುತ್ತಾರೆ - ನಿ.೭.೨ ॥ ಈ ಐನ್ದ್ರಕಾಂಡದ ಮನ್ತ್ರಗಳಲ್ಲಿರುವ ಇನ್ದ್ರ ಶಬ್ದಕ್ಕೆ ಮೇಲೆ ತಿಳಿಸಿರುವ ಒಂದಲ್ಲ ಒಂದು ಅರ್ಥವು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಅನ್ವಯ ವಾಗುತ್ತಿರುತ್ತದೆ.

ಇನ್ದ್ರನು ಮುಖ್ಯವಾಗಿ ಅನ್ತರಿಕ್ಷಸ್ಥಾನೀಯ ವಿದ್ಯುದ್ದೇವತೆಯೆಂದೇ ಪರಿಗಣಿಸಲ್ಪಟ್ಟಿದ್ದಾನೆ. ತಮಸ್ಸು ಕ್ರೌರ್ಯ ಅನಾವೃಷ್ಟಿ ಇತ್ಯಾದಿ ರೂಪಗಳಲ್ಲಿ ರುವ ದೈತ್ಯರನ್ನು ಜಯಿಸಿ ಬೆಳಕನ್ನೂ ಶಾಂತಿಯನ್ನೂ ನೀರನ್ನೂ ಲೋಕಕ್ಕೆ ಅನುಗ್ರಹಿಸುತ್ತಿರುವ ಇನ್ದ್ರನ ಅಪರಿಮಿತ ಶಕ್ತಿ ಸಾಮರ್ಥ್ಯ, ಐಶ್ವರ್ಯ, ವೈಭವ, ಅನುಗ್ರಹ ಲೋಕೋಪಕಾರಗಳು ಸ್ತುತಿಗಳು ಈ ಕಾಂಡದ ಮನ್ತ್ರಗಳಲ್ಲಿ ಬಗೆ ಬಗೆಯಾಗಿ ಪುನಃ ಪುನಃ ವ್ಯಕ್ತವಾಗಿದ್ದು ಅವು ಸಂಕ್ಷೇಪವಾಗಿ ಹೀಗಿವೆ.

ಸಮಸ್ತ ಉತ್ಪತ್ತಿಗಳಿಗೂ ಕಾರಣರಾದ ನಿರಂತರ ಕಾರ್ಯಪ್ರವೃತ್ತರಾದ ದ್ಯಾವಾಪೃಥಿವೀಗಳೇ ಇನ್ದ್ರನ ತಂದೆತಾಯಿಯರಾಗಿದ್ದು ಪುತ್ರನಾದ ಇನ್ದ್ರನನ್ನು ಸದಾ ಓಲೈಸುತ್ತಿರುತ್ತಾರೆ. ಇನ್ದ್ರನು ಬೃಹದಾಕಾರಿಯೂ ಸ್ಫುರದ್ರೂಪಿಯೂ ಯುವಕನೂ ಜರಾರಹಿತನೂ ತೇಜಸ್ವಿಯೂ ಅಪ್ರತಿಹತ ಶಕ್ತಿಯ ಶೂರನೂ ಬಹು ಬಲಿಷ್ಠನೂ ಸಾಹಸಿಯೂ ಸಮರ್ಥನೂ ಯಾರಿಗೂ ತಲೆಬಾಗದವನೂ ಮಾಯಾವಿಯೂ ಆಗಿದ್ದು ಇಚ್ಛೆಬಂದಂತೆ ನಾನಾ ರೂಪಗಳನ್ನು ಧರಿಸುವ ಚತುರನೂ ಆಗಿದ್ದಾನೆ. ಮಹಾಬುದ್ಧಿಶಾಲಿಯಾದ ಇನ್ದ್ರನು ವಿಚಾರಪರನೂ ನಿಜಸ್ಥಿತಿಯನ್ನು ತಿಳಿದವನೂ ಬ್ರಹ್ಮವೇತ್ತನೂ ಹೌದು. ಇನ್ದ್ರನ ಕರ್ತವ್ಯ ನಿಷ್ಠೆ ಯು ಪರ್ವತದಂತೆ ಅಚಲ. ಇವನು ಎಂದೂ ಯಾರಿಂದಲೂ ನಾಶಗೊಳಿ ಸಲ್ಪಡದವನು. ಋಷಿಮುನಿಗಳಿಗೆ ಹಿತವನ್ನುಂಟುಮಾಡುವುದರಲ್ಲೂ ಕುದುರೆ ಗಳನ್ನೂ ಗೋವುಗಳನ್ನೂ ಸಜ್ಜನರನ್ನೂ ಪಾಲಿಸುವುದರಲ್ಲಿ ಬಹು ಉತ್ಸಾಹಿ ಯೂ ಜ್ಞಾನನಿಷ್ಠನೂ ಆಗಿದ್ದು ಸದಾ ಎಲ್ಲರನ್ನೂ ಆಕರ್ಷಿಸುತ್ತಿರುತ್ತಾನೆ. ಸದಾ ನಮ್ಮ ಸಂಗಡವೇ ಇದ್ದು ನಮ್ಮ ಇಷ್ಟಾರ್ಥಗಳನ್ನು ನೆರವೇರಿಸುತ್ತಾ ನಮ್ಮನ್ನು ಸಂರಕ್ಷಿಸುತ್ತಿರುತ್ತಾನೆ. ಶ್ರೀಸಾಮಾನ್ಯರೂ ಅನುಸರಿಸಬಹುದಾದಂತಹ ಉತ್ತಮ

ನಡೆನುಡಿಗಳುಳ್ಳವನಾಗಿ ಬಗೆಬಗೆಯ ನೂರಾರು ಕೆಲಸಗಳಲ್ಲಿ ಸರ್ವದಾ ತೊಡಗಿದ್ದು ನೂರಾರು ಯುಕ್ತಿಗಳಿಂದ ಎಲ್ಲರಿಗೂ ಹಿತವನ್ನುಂಟು ಮಾಡುವ ಯಾವುದೇ ಕಾರ್ಯವನ್ನು ಮಿಂಚಿನ ವೇಗದಿಂದ ನೆರವೇರಿಸಬಲ್ಲ ಕಾರ್ಯಪಟು. ಹುಟ್ಟಿನಿಂದಲೇ ಶತ್ರುರಹಿತನೂ ದುಷ್ಟಶಿಕ್ಷಕನೂ ಶಿಷ್ಟರಕ್ಷಕನೂ ಮಹಾದಾನಶೀಲನೂ ಬಹುಜನ ಪೂಜಿತನೂ ಪ್ರಶಂಸಿತನೂ ಆದ ಇನ್ದ್ರನು ಸಮಸ್ತರ ಹಿತೈಷಿಯೂ ಆಗಿದ್ದಾನೆ.

ಇನ್ದ್ರನು ದುಃಸ್ವಪ್ನವನ್ನೂ ಅದರ ಕಾರಣವನ್ನೂ ನಾಶಮಾಡುವ ಮುರಿದ ಒಡೆದ ಸಮಸ್ತ ಸಾಧನ ಸಾಮಗ್ರಿಗಳನ್ನೂ ಕ್ಷಣಾರ್ಧದಲ್ಲಿ ಸರಿಮಾಡಿ ಜೋಡಿಸಿ ಉಪಯೋಗಕ್ಕೆ ತರುವ ಕುಶಲಿ. ಇನ್ದ್ರನಿಗೆ ಸಹೋದರರಾಗಲೀ ನಾಯಕರಾಗಲೀ ಯಾರೂ ಇಲ್ಲ. ವಿಶಾಲವಾದ ದ್ಯುಲೋಕಕ್ಕೆ ಒಡೆಯನಾದ ಇನ್ದ್ರನು ವಿಶ್ವವ್ಯಾಪಿ ತಮಸ್ಸಿನಲ್ಲಿದ್ದ ದ್ಯಾವಾಪೃಥ್ವಿಗಳಿಗೆ ಪ್ರಕಾಶವನ್ನು ತಂದು ವೈಭವೋಪೇತವಾದ ಅನ್ಯಲೋಕಗಳನ್ನು ಮತ್ತಷ್ಟು ವೈಭವೋಪೇತವನ್ನಾಗಿ ಮಾಡಿದ. ಅಮೂಲ್ಯವಾದ ಆಭೂಷಣಗಳಿಂದಲಂಕೃತನಾಗಿ ಕಿರೀಟಧಾರಿಯಾಗಿ ಸಭೆಯನ್ನು ಪ್ರವೇಶಿಸಿ ಸಿಂಹಾಸನವನ್ನಲಂಕರಿಸಿ ದೇವತೆಗಳಿಂದ ಸೇವಿಸಲ್ಪಡುತ್ತಿರುತ್ತಾನೆ. ಭಕ್ತರ ಪ್ರಾರ್ಥನೆಗಳನ್ನು ಈಡೇರಿಸುತ್ತಾ ಆರ್ತರ ದುಃಖವನ್ನು ನಿವಾರಿಸುತ್ತಿರುತ್ತಾನೆ. ಬಣ್ಣದ ಕೂದಲುಗಳಿಂದ ಬಹುಶೋಭಾಯಮಾನ ವಾಗಿರುವ ಬಲಶಾಲಿಯಾಗಿರುವ ತಮ್ಮನ್ನು ತಮ್ಮಷ್ಟಕ್ಕೇ ರಥಕ್ಕೆ ಹೂಡಿಕೊಳ್ಳುವ ಇನ್ದ್ರನ ಇಷ್ಟದಂತೆ ಮನೋವೇಗದಲ್ಲಿ ಧಾವಿಸುವ ಹರಿ ಎಂಬ ಕುದುರೆ ಗಳಿಂದೆಳೆಯಲ್ಪಡುವ ಭವ್ಯವಾದ ಚಿನ್ನದ ರಥದಲ್ಲಿ ಆಸೀನನಾಗಿ ಮಿಂಚಿನ ವೇಗ ದಲ್ಲಿ ಸಂಚರಿಸುತ್ತಿರುತ್ತಾನೆ. ಆಹ್ವಾನಗಳನ್ನು ಮನ್ನಿಸಿ ಸಕಾಲದಲ್ಲಿ ಯಜ್ಞಗಳಿಗೆ ದಯಮಾಡಿಸುತ್ತಾನೆ.

ಸೋಮಪಾ ಎಂಬ ವಿಶೇಷಣಕ್ಕೆ ಪಾತ್ರನಾಗಿರುವಷ್ಟರಮಟ್ಟಿಗೆ ಇನ್ದ್ರ ಸೋಮಪಾನಾಸಕ್ತ. ಹಸುವಿನ ಹಾಲುಮಿಶ್ರಿತ ಅರಳುಮಿಶ್ರಿತ ಅರಳುಹಿಟ್ಟು ಮಿಶ್ರಿತ ಜವೆಗೋಧಿಹಿಟ್ಟು ಮಿಶ್ರಿತ, ಕಜ್ಜಾಯ ಸಹಿತ ಇತ್ಯಾದಿ ಬಗೆಬಗೆಯ

ಸೋಮವನ್ನು ಸಿದ್ಧಪಡಿಸುವ ವಿಧಿವಿಧಾನಗಳ ವಿವರಗಳು ಈ ಮನ್ತ್ರಗಳಲ್ಲಿವೆ.

ಸೋಮಲತೆಯನ್ನು ಜಜ್ಜಿ, ಹಿಂಡಿ ವಿವಿಧ ರೀತಿಯಲ್ಲಿ ಶೋಧಿಸಿ ದ್ರೋಣ ಕಲಶವೆಂಬ ಪವಿತ್ರ ಪಾತ್ರೆಯಲ್ಲಿ ಸಂಗ್ರಹಿಸಿರುವ ಮನ್ತ್ರಪೂತವಾದ ಸೋಮರಸವು ತೇಜಸ್ಸಿನಿಂದ ಬೆಳಗುತ್ತಾ ಪಾನಮಾಡಿದವರ ಉತ್ಸಾಹ ಆನಂದವನ್ನು ವರ್ಧಿಸುತ್ತಾ ಬಲಶೌರ್ಯ ಸಾಹಸ ಸಾಮರ್ಥ್ಯಗಳನ್ನು ಹೆಚ್ಚಿಸಿ ವೃತ್ರಸಂಹಾರಾದಿ ಮಹಾಕಾರ್ಯಗಳನ್ನೆಸಗಲು ನೆರವಾಗುತ್ತಿರುತ್ತದೆ.

ಇನ್ದ್ರನು ಬಹು ಪ್ರಕಾರದ ಅಪರಿಮಿತ ಧನದ ಒಡೆಯನಾಗಿದ್ದು ಬಂಜೆ ಹಸುವಿನಂತಿರದೆ ಬೇಡುವವರಿಗೆ ಉದಾರವಾಗಿ ದಾನ ಮಾಡುವನೆಂಬುದನ್ನು ತಿಳಿದ ಭಕ್ತರ ಆಶಯಗಳೂ ಬೇಡಿಕೆಗಳ ಪರಿಯೂ ಇನ್ದ್ರನ ಅನುಗ್ರಹ ಬುದ್ಧಿಯೂ ಮನ್ತ್ರಗಳಲ್ಲಿ ಬಗೆಬಗೆಯಾಗಿ ವ್ಯಕ್ತವಾಗಿದೆ. ಹಸು ಕುದುರೆ ರಥ, ಭೂಮಿ, ಚಿನ್ನ, ವಜ್ರ ಇತ್ಯಾದಿಗಳನ್ನು ಬೇಡುವುದು ಸಾಮಾನ್ಯವಾಗಿದೆ. ವಿಲಕ್ಷಣವಾದ ತೇಜಸ್ವಿಯಾದ ಹೊಳೆಯುವ ಶಬ್ದಮಾಡುವ ಕೈಯಲ್ಲಿ ತೆಗೆದುಕೊಂಡು ಹೋಗಲು ಸಾಧ್ಯವಾದ ಸಂಗ್ರಹಯೋಗ್ಯವಾದ ಧನಬೇಕೆಂದು ಕೆಲವರು ಬಿನ್ನವಿಸಿಕೊಳ್ಳುತ್ತಿರುತ್ತಾರೆ. ಸಂತಾನಭಾಗ್ಯ ಸಹಿತ ಸೌಭಾಗ್ಯದಾಯಕವಾದ ಸುಖಪ್ರದವಾದ ಬಗೆಬಗೆಯ ಧನವನ್ನಪೇಕ್ಷಿಸುತ್ತಾರೆ. ಅಪರಿಮಿತ ಹಾಲು ಕರೆಯುವ ಚಿನ್ನದ ಕುಂಡಲಗೊಣಸುಗಳಿಂದಲಂಕೃತವಾದ ಶೋಭಾಯಮಾನವಾದ ಯಜ್ಞಸಾಧನವಾದ ಗೋವುಗಳು ಬೇಕೆಂದು ಬೇಡುತ್ತಾರೆ.

ಗೋರಕ್ಷಕನಿಗೂ ಸ್ತುತಿಕರ್ತನಿಗೂ ಸದಾಚಾರವುಳ್ಳವನಿಗೂ ವಿಪುಲ ಧನವನ್ನು ನಿಡುವ ನಿನ್ನನ್ನು ಯಾರೂ ತಡೆಯಲಾರರೆಂದು ಪ್ರಶಂಸಿಸುತ್ತಾರೆ. ನಿನ್ನ ಉಪಾಸಕರಿಗೂ ನಿನಗೆ ಸೇವೆ ಸಲ್ಲಿಸುವವರಿಗೂ ಉಪಭೋಗ್ಯವಾದ ಧನವನ್ನು ನೀಡಿ ದೊಡ್ಡವರನ್ನಾಗಿ ಮಾಡಬೇಕೆಂದು ಅಂಗಲಾಚುತ್ತಾರೆ. ಶತ್ರುಗಳನ್ನು ಸೋಲಿಸಿ ವಿಜಯಿಗಳಾಗುವುದಕ್ಕೂ ಎಲ್ಲರ ಸಂರಕ್ಷಣೆಗೂ ಶ್ರೇಷ್ಠನಾದ ನೀನು ತುಂಬಾ ಕೆಳಗಿನವರಾದ ನಮಗೆ ತೃಪ್ತಿಯಾಗುವಷ್ಟು ಐಶ್ವರ್ಯವನ್ನು ಅನುಗ್ರಹಿಸಬೇಕೆಂದು ಕೇಳಿಕೊಳ್ಳುತ್ತಾರೆ. ಭದ್ರವಾದ ಖಜಾನೆಯಲ್ಲಿರುವ ಭೂಮಿಯ ಗಟ್ಟಿ ಭಾಗದಲ್ಲಿ ಹುಗಿದಿಟ್ಟಿರುವ ಧನವನ್ನು ಬೇಡುತ್ತಾರೆ. ಇನ್ದ್ರನು

ಅನುಗ್ರಹಿಸುವ ಧನವು ತಮ್ಮಲ್ಲಿ ವೃದ್ಧಿಯಾಗುವುದೆಂಬ ಅತೀವ ಶ್ರದ್ಧೆಯೇ ಈ ಬೇಡಿಕೆಯ ಹಿನ್ನೆಲೆಯಾಗಿದೆ. ತೇಜಸ್ವಿಯಾದ ವಿಲಕ್ಷಣವಾದ ಗ್ರಹಣ ಯೋಗ್ಯವಾದ ಧನವನ್ನು ಬಲಗೈಯಲ್ಲಿ ನೀಡಿ ಈ ಐಶ್ವರ್ಯವು ಪೋಲಾಗದಂತೆ ಶ್ರೇಷ್ಠವಾದ ಧನವನ್ನು ಶ್ರೇಷ್ಠವಾದ ಕಾರ್ಯಗಳಿಗೆ ವಿನಿಯೋಗ ಮಾಡುವ ಸಾಮರ್ಥ್ಯವನ್ನೂ ನೀಡಬೇಕೆಂದು ನಮ್ರತೆಯಿಂದ ಕೇಳಿಕೊಳ್ಳುತ್ತಾರೆ. ಬಹು ಪ್ರಕಾರದ ಬಲವನ್ನೀಯುವ ಪುಷ್ಟಿಕಾರಕವಾದ ಕಲ್ಯಾಣಕಾರಿಯಾದ ಅನ್ನವನ್ನು ಅನುಗ್ರಹಿಸಬೇಕೆಂದು ಬಗೆಬಗೆಯಾಗಿ ಬೇಡುತ್ತಾರೆ. ನಾವು ನಮ್ಮ ವೀರರಾದ ಪುತ್ರ ಪೌತ್ರರೊಂದಿಗೆ ಒಂದು ನೂರು ವರ್ಷ ಪರ್ಯಂತ ಸುಖಸಂತೋಷ ಗಳಿಂದಿದ್ದು ರೋಗಗಳಿಂದಲೂ ಶತ್ರುಗಳಿಂದಲೂ ದುಷ್ಟಬುದ್ಧಿಯಿಂದಲೂ ದುಷ್ಟಕರ್ಮಗಳಿಂದಲೂ ದೂರವಾಗಿರುವಂತೆ ನೋಡಿಕೊಳ್ಳಬೇಕೆಂದು ಆತ್ಮೀ ಯತೆಯಿಂದ ಬಿನ್ನವಿಸಿಕೊಳ್ಳುವ ಪರಿ ಬಹು ಮನೋಜ್ಞ ವಾಗಿದೆ.

ಶಾಸಕನಾಗಿರುವ ಇನ್ದ್ರನನ್ನು ಗೋವುಗಳನ್ನು ರಕ್ಷಿಸಲೂ ದುರಾಚಾರಿ ಗಳನ್ನು ಶಿಕ್ಷಿಸಲೂ ಯುದ್ಧದಲ್ಲಿ ಜಯಶೀಲರಾಗಲೂ ಸಹಾಯ ಮಾಡ ಬೇಕೆಂದು ಕೇಳಿಕೊಳ್ಳುತ್ತಾರೆ. ಬಲಯುತರೂ ಶತ್ರುಗಳಿಗೆ ತಲೆಬಾಗದ ವೀರರೂ ದೂರವಾಗಬಾರದೆಂದು ಅವರ ಮನಸ್ಸನ್ನೂ ಒಲಿಸಿಕೊಳ್ಳುತ್ತಾರೆ. ದೈತ್ಯದಾನವ ರನ್ನೂ ಶತ್ರುಗಳನ್ನೂ ಪರಾಜಯಗೊಳಿಸುವ ಸಾಮರ್ಥ್ಯವನ್ನು ನಮಗೆ ಅನುಗ್ರಹಿಸಿ ಸ್ವರಾಜ್ಯದ ಅರ್ಚನೆಗಾಗಿ ಅವರ ಮೇಲೆ ತನ್ನ ಅಧಿಕಾರ ಸ್ಥಾಪಿಸಬೇಕೆಂದು ಇನ್ದ್ರನನ್ನು ಹುರಿದುಂಬಿಸುತ್ತಾರೆ. ಇನ್ದ್ರನ ಸಾನ್ನಿಧ್ಯದಿಂದ ನಮ್ಮ ಶಕ್ತಿಯು ವೃದ್ಧಿಸಿ ಶತ್ರುಗಳನ್ನಾಕ್ರಮಿಸಲು ಬೇಕಾದ ತೇಜಸ್ವಿಯಾದ ಮಹಾಸಾಧನಗಳು ನಮಗೆ ದೊರಕುತ್ತವೆಯಾಗಿ ನಮ್ಮ ಮುಂದಾಳುಗಳ ಬಲವೂ ವೃದ್ಧಿಸಿ ಸಮಸ್ತ ಶತ್ರುಗಳನ್ನೂ ಏಕಕಾಲದಲ್ಲಿ ಜಯಿಸುವ ಸಾಮರ್ಥ್ಯ ಉಂಟಾಗುತ್ತದೆ ಎಂಬ ಭರವಸೆಯನ್ನು ಇಟ್ಟುಕೊಂಡಿದ್ದಾರೆ. ಶೂರನೂ ವೀರನೂ ಯುದ್ಧದಲ್ಲಿ ಸ್ಥಿರನೂ ಆಗಿರುವ ಇನ್ದ್ರನನ್ನು ಸಹಾಯಕ್ಕಾಗಿ ಆಹ್ವಾನಿಸುತ್ತಾರೆ. ಶತ್ರುಗಳು ತಮ್ಮನ್ನು ಆಕ್ರಮಣ ಮಾಡಲಾರದಂತಹ ಸಂರಕ್ಷಣೆಯನ್ನು ಬೇಡುತ್ತಾರೆ.

ಇನ್ದ್ರನ ದಾನಶೀಲತೆಯೂ ಉದಾರತೆಯೂ ಅಕ್ಷುಣ್ಣವಾಗಿರಬೇಕೆಂದು ಆಶಿಸುತ್ತಾ ನಾವು ನಿರನ್ತರವಾಗಿ ಧನವನ್ನು ಸಂಪಾದಿಸುತ್ತಾ ನಾವು ನೀಡುವ ದಾನವು ಕಡಿಮೆಯಾಗದಂತೆಯೂ ನಾವು ಎಂದೆಂದೂ ಪಾಪಿಗಳಾಗದಂತೆಯೂ ಇರುವಂತೆ ಅನುಗ್ರಹಿಸಬೇಕೆನ್ನುತ್ತಾರೆ. ನಮ್ಮನ್ನು ಸತ್ಯವನ್ನೇ ನುಡಿಯುವವರನ್ನಾಗಿ ಯಾವಾಗ ಮಾಡುವೆ! ಎಂದು ಪ್ರಶ್ನಿಸುತ್ತಾರೆ? ಅನೇಕ ಪಾಶಗಳಿಂದ ಬಂಧಿತರಾದ ನಮ್ಮನ್ನು ಬಿಡುಗಡೆ ಮಾಡಿ ನಮ್ಮ ಮನಸ್ಸು ಬಲ ಕರ್ಮಗಳು ಕಲ್ಯಾಣ ಪ್ರೇರಿತವಾಗಿರುವಂತೆಯೂ ಪಾಪಕರ್ಮದಲ್ಲಿ ಆಸಕ್ತಿ ಇರದಂತೆಯೂ ಅನುಗ್ರಹಿಸಬೇಕೆಂದು ಬಯಸುತ್ತಾರೆ. ವಜ್ರಧಾರಿ ಇನ್ದ್ರನು ನಮ್ಮ ಧನಸಂಪಾದನೆಯ ಸಮಸ್ತ ಮಾರ್ಗಗಳೂ ಋಜುವಾಗಿರುವಂತೆಯೂ ದೂಷಿತ ಕರ್ಮಗಳಲ್ಲಿ ತೊಡಗದಂತೆಯೂ ಕ್ರೋಧಪೂರಿತ ಮಾತಿಗೆ ಅವಕಾಶವಿಲ್ಲದಂತೆಯೂ ಮಾಡಬೇಕೆಂದಾಶಿಸುತ್ತಾರೆ.

ಈ ಸ್ಥಾವರ ಜಂಗಮಗಳ ಜಗತ್ತಿನ ಒಡೆಯನೂ ಆತ್ಮಜ್ಞಾನಿಯೂ ಸದಾವೃದ್ಧಿಕಾರಕನೂ ಸಮಸ್ತರಿಂದ ಸ್ತುತಿಸಲ್ಪಡುವವನೂ ಮುನಿಗಳ ಮಿತ್ರನೂ ಅನ್ನಾದಿಗಳಿಂದ ಸಮೃದ್ಧನೂ ಅಶ್ವ ಗೋ ಹಾಗೂ ಸಜ್ಜನರ ಪಾಲಕನೂ ಸ್ವಸಾಮರ್ಥ್ಯದಿಂದಾಗಿ ಯಾರಿಂದಲೂ ಎದುರಿಸಲ್ಪಡದವನೂ ಬಾಧಕ ಶತ್ರುಗಳನ್ನು ಸೋಲಿಸುವವನೂ ಸಾವಿರಾರು ರೀತಿಯಲ್ಲಿ ದಾನ ಮಾಡುವವನೂ ನಮಸ್ಕಾರ ಯೋಗ್ಯನೂ ಆದ ಇನ್ದ್ರನು ಪರಿಪರಿಯಾಗಿ ಸ್ತುತಿಸಲ್ಪಟ್ಟಿದ್ದಾನೆ. ಭೋಗಪ್ರಾಪ್ತಿಗಾಗಿ ಇನ್ದ್ರನನ್ನು ಆರಾಧಿಸಬೇಕೆಂದು ಲೋಕಕ್ಕೆ ತಿಳಿಸುತ್ತಾ ನಮಗೆ ಆಶ್ರಯ ಯೋಗ್ಯವಾದ ಮೂರು ಅಂತಸ್ತಿನ ಬಹುಪ್ರಕಾಶಯುಕ್ತವಾದ ಕಲ್ಯಾಣಕಾರಿಯಾದ ನಿವಾಸವನ್ನೂ ಪುಷ್ಟಿಯುಕ್ತ ವಾದ ಆರೋಗ್ಯಕಾರಿಯಾದ ಆಹಾರವನ್ನೂ ತಂದೆಯು ಮಗನಿಗೆ ಹೇಗೆ ಒಳ್ಳೆಯ ಶಿಕ್ಷಣವನ್ನೂ ನೀಡುತ್ತಾನೆಯೋ ಹಾಗೆಯೇ ಒಳ್ಳೆಯ ಶಿಕ್ಷಣವನ್ನು ನೀಡಬೇಕೆಂದು ಕೇಳಿಕೊಳ್ಳುತ್ತಾರೆ. ವಾಯುವು ನಮ್ಮ ಮನೆ ಮನಗಳಿಗೂ ಹೃದಯಕ್ಕೂ ಆಯುರ್ವರ್ಧಕವಾದ ಓಷಧಿಗಳನ್ನು ತರಲೆಂದು ಬಯಸುತ್ತಾರೆ. ಧನಾಪೇಕ್ಷಿಗಳಾಗಿ ಇನ್ದ್ರನ ಬಲಗೈ ಹಿಡಿಯುತ್ತಾರೆ. ಕುಶಲಕರ್ಮಿಗಳನ್ನು ರಕ್ಷಿಸುತ್ತಾ ಎಲ್ಲರಿಗೂ ಅನ್ನ

ಸಂಪಾದನೆಯ, ಕಾರ್ಯಕುಶಲತೆಯನ್ನೂ ಶಾರೀರಿಕ ಮಾನಸಿಕ ಬಲವನ್ನೂ ಅನುಗ್ರಹಿಸಬೇಕೆಂದೂ ಯಾವಾವುದರ ಬಗೆಗೆ ಭಯ ಪಡುತ್ತೇವೋ ಅವುಗಳ ಬಗೆಗೆ ನಿರ್ಭಯವಾಗಿರುವಂತೆ ಮಾಡಬೇಕೆಂದೂ ಬಯಸುತ್ತಾರೆ. ಉಪಕಾರಿಯೂ ಬಲದ ಒಡೆಯನೂ ಶತ್ರುಗಳನ್ನು ಜಯಿಸುವವನೂ ಧನವಂತನೂ ದಾನಶೀಲನೂ ಆದ ಮುಂದಾಳನ್ನು ಸ್ತುತಿಸಿ ಕೃತಜ್ಞತೆಯನ್ನರ್ಪಿಸುತ್ತೇವೆಂದು ಹೇಳಿಕೊಳ್ಳುತ್ತಾರೆ.

ಇನ್ದ್ರನು ಹುಟ್ಟುತ್ತಲೇ ಕೈಯಲ್ಲಿ ಬಾಣವನ್ನು ಹಿಡಿದುಕೊಂಡು ಪ್ರಸಿದ್ಧರಾಗಿರುವ ವೀರರಾರೆಂದು ಸುತ್ತಲೂ ಇದ್ದವರನ್ನು ಕೇಳಿದ. ಇನ್ದ್ರನು ಹುಟ್ಟಿನಿಂದಲೂ ಅಪ್ರತಿಮ ಸಾಹಸ ಬಲ ಸಾಮರ್ಥ್ಯ ಶೌರ್ಯಗಳಿಗೆ ಪ್ರಸಿದ್ಧನಾಗಿದ್ದಾನೆ. ಶಚೀಪತಿಯು ಶಕ್ತಿಸಾಮರ್ಥ್ಯಗಳ ಒಡೆಯ. ವಜ್ರಧಾರಿಯಾದ ಇನ್ದ್ರನ ಮಹಾಶಕ್ತಿ ಸಾಮರ್ಥ್ಯಗಳು ಅಸದಳ. ದ್ಯಾವಾಪೃಥ್ವಿಗಳೆರಡನ್ನೂ ತನ್ನ ಉಡುಗೆಯಾಗಿ ಧರಿಸಿಕೊಳ್ಳುವಷ್ಟು ಸಮರ್ಥ. ಅವನ ಬಲ ಸದಾವೃದ್ಧಿಯಾಗುತ್ತಲೇ ಇರುತ್ತದೆ. ಯುದ್ಧ ಕುಶಲಿಯಾಗಿದ್ದು ಎಂತಹ ಬಲಶಾಲಿಯಾದ ಶತ್ರುವನ್ನೂ ಅವನ ಕೋಟೆಕೊತ್ತಲುಗಳನ್ನೂ ನಾಶಮಾಡಬಲ್ಲವ. ರಥಗಳ ಮುಂಚೂಣಿಯಲ್ಲಿದ್ದು ಎಲ್ಲರಿಗಿಂತ ಮುಂದಾಗಿ ಶತ್ರುಗಳನ್ನು ಆಕ್ರಮಿಸಿ ಸೇನೆಗಳನ್ನು ಸದೆಬಡಿದು ನಗರಗಳನ್ನು ವಶಪಡಿಸಿಕೊಳ್ಳಬಲ್ಲವನು.

ನೂರು ದ್ಯಾವಾಪೃಥ್ವಿಗಳೂ ನೂರು ಸೂರ್ಯರೂ ಇನ್ದ್ರನಿಗೆ ಸಮನಾಗಲಾರರು. ಎಲ್ಲರ ಶಾಸಕನಾಗಿ ಭಯರಹಿತನಾಗಿ ಶತ್ರುಗಳ ಮೇಲೆ ಶಸ್ತ್ರಗಳನ್ನು ಪ್ರಹರಿಸುತ್ತಾ ಯುದ್ಧದಲ್ಲಿ ಸ್ಥಿರವಾಗಿರುವವನು ಇನ್ದ್ರನು. ರಥಿಕ ಶ್ರೇಷ್ಠನಾಗಿದ್ದು ಯಾರಿಂದಲೂ ಸೋಲಿಸಲ್ಪಡದವನು. ತನ್ನ ಮೀಸೆಗಳನ್ನೂ ದಾಡಿಗಳನ್ನೂ ನೀವುತ್ತಾ ತನ್ನ ಶ್ರೇಷ್ಠತೆಯನ್ನು ತೋರಿಸುತ್ತಾ ಶತ್ರುಗಳನ್ನು ಭಯಪಡಿಸುತ್ತಾ ಶತ್ರುಗಳಿಂದ ಧನಸಂಗ್ರಹಿಸುತ್ತಾ ಏಕಕಾಲದಲ್ಲಿ ಅನೇಕ ಶತ್ರುಗಳನ್ನು ಒಟ್ಟಿಗೆ ನಾಶಮಾಡುವವ. ಶತ್ರುಗಳನ್ನು ಗೆಲ್ಲುವ ಇಚ್ಛೆಯುಳ್ಳ ಹೊಸ ಹೊಸ ವೀರರನ್ನು ಹುರಿದುಂಬಿಸುತ್ತಾ ವಿಜಯ ಮಾರ್ಗದಲ್ಲಿ ಒಯ್ಯುವವ. **ಪ್ರೇಹಿ** ಶತ್ರುವಿಗೆ ಮುತ್ತಿಗೆ ಹಾಕು **ಅಭೀಹಿ** ಶತ್ರುವನ್ನು ನಾಲ್ಕೂ

ಕಡೆಯಿಂದ ಮುತ್ತಿ ಭ್ರಮೆಯನ್ನುಂಟುಮಾಡಿ ಆಕ್ರಮಿಸು. ಧೃಷ್ಣುಹಿ ಶತ್ರುವನ್ನು ವಧಿಸಿ ನಾಶಮಾಡು ಎಂಬ ಅರ್ಥದ ಈ ಪದಗಳು ಪದೇ ಪದೇ ಯುದ್ಧ ವರ್ಣನೆಯ ಮನ್ತ್ರಗಳಲ್ಲಿ ಅನುರಣಿತವಾಗುತ್ತಿರುತ್ತವೆ. ಇನ್ದ್ರನು ಯುದ್ಧದ ಸಕಲ ಪ್ರಕಾರಗಳಲ್ಲೂ ಪ್ರವೀಣನಾಗಿದ್ದು ಸಕಾಲದಲ್ಲಿ ಶತ್ರುಗಳನ್ನೂ ದುರಾಚಾರಿಗಳನ್ನೂ ಮಿಂಚಿನ ವೇಗದಲ್ಲಿ ಆಕ್ರಮಿಸಿ ಸದೆಬಡಿದು ಧ್ವಂಸ ಮಾಡುತ್ತಾ ಮಾನವರ ದುಃಖ ದೂರ ಮಾಡುವವನು. ತನ್ನ ವಜ್ರಾಯುಧವನ್ನು ಮಾನವರ ಕಲ್ಯಾಣಕ್ಕಾಗಿಯೇ ಉಪಯೋಗಿಸುವವನು.

ಮಹಾಮೇಘಗಳನ್ನು ಛಿದ್ರಗೊಳಿಸಿ ಪರ್ವತಗಳ ಮೇಲೆ ನೀರು ಹರಿಯುವಂತೆ ಮಾಡಿ ಉಬ್ಬರದಲ್ಲಿರುವ ಸಮುದ್ರವನ್ನು ಆನಂದಗೊಳಿಸಿದ ಮಹಾತ್ಮ. ನಾಗರಿಕರ ಮೇಲೂ ಗೋವುಗಳ ಮೇಲೂ ಆಕ್ರಮಣ ಮಾಡುವ ಶತ್ರುಗಳಿಗೆ ಇನ್ದ್ರನು ಸರಿಯಾಗಿ ಉತ್ತರಿಸುತ್ತಾನೆ. ಸ್ವರಾಜ್ಯದ ಸಂರಕ್ಷಣೆಗಾಗಿ ಭೂಮಿಯ ಮೇಲಿನ ಅಹಿ ಹಾಗೂ ಫಣಿಗಳೆಂಬ ಕಪಟಿ ಶತ್ರುಗಳನ್ನು ಕಪಟದಿಂದಲೇ ನಾಶಮಾಡಿದ ಚತುರ. ದಿವೋದಾಸನ ಹಿತಕ್ಕಾಗಿ ಶಂಬರಾಸುರನನ್ನು ಸಂಹರಿಸಿದ. ಸಮುದ್ರದ ನೊರೆಯನ್ನೇ ಆಯುಧವನ್ನಾಗಿ ಬಳಸಿಕೊಂಡು ನಮುಚಿ ಎಂಬ ಅಸುರನನ್ನು ನಾಶ ಮಾಡಿದ. ಹತ್ತು ಸಹಸ್ರ ಸೈನಿಕರೊಂದಿಗೆ ಕೃಷ್ಣನೆಂಬಸುರನು ಜಗತ್ತನ್ನೇ ತಲ್ಲಣಗೊಳಿಸುತ್ತಿರುವುದನ್ನು ಕಂಡು ಅವನು ಅಂಶುಮತೀ ನದೀ ತೀರಕ್ಕೆ ಬಂದಾಗ ಮಾನವರ ಹಿತಕ್ಕಾಗಿ ಅವರೆಲ್ಲರನ್ನೂ ನಾಶಮಾಡಿದ ಮಾನವ ಹಿತೈಷಿ. ಆ ವೃಣೋತಿ ಇತಿ ವೃತ್ರಃ ನಾಲ್ಕೂ ಕಡೆಗಳಿಂದ ಮುತ್ತುವ ಯಾರಿಂದಲೂ ಎದುರಿಸಲಾಗದ ವೃತ್ರಾಸುರನನ್ನು ದಧೀಚಿ ಋಷಿಯ ಎಲುಬನ್ನೇ ವಜ್ರಾಯುಧವನ್ನಾಗಿಸಿಕೊಂಡು ಅದರಿಂದಲೇ ಸಂಹರಿಸಿ ಶಾಂತಿ ನೆಲಸುವಂತೆ ಮಾಡಿದ ಖ್ಯಾತಿ ಇನ್ದ್ರನದು.

ಈ ಮನ್ತ್ರಭಾಗದಲ್ಲಿ ಕಂಡುಬರುವ ಕೆಲವು ಉಪದೇಶಗಳೂ ಲೋಕೋಕ್ತಿಗಳೂ ಹೀಗಿವೆ - ಉಗ್ರವಾದ ಕಠಿಣವಾದ ಮಾತನಾಡಬೇಡ. ಸಮಾನ ವಿಚಾರದ ಮನಸ್ಸಿನವರನ್ನು ಶತ್ರುಗಳಿಂದ ದೂರಮಾಡಿ ಉನ್ನತಿಯ ಪಥಕ್ಕೆ ಒಯ್ಯುವವನಿಗೆ ಪಾಪಲೇಪವಾಗುವುದಿಲ್ಲ. ಸ್ವಯಾರ್ಜಿತವಾದ ಶುಚಿ

ಯಾದ ಧನದಿಂದ ಯಜ್ಞಗಳನ್ನು ನೆರವೇರಿಸುವವನು ಉತ್ತಮ ಸ್ಥಾನವನ್ನೂ ಐಶ್ವರ್ಯವನ್ನೂ ಶಾಂತಿಯನ್ನೂ ಪಡೆಯುತ್ತಾನೆ. ವ್ರತಗಳನ್ನು ಪಾಲಿಸದವರಿಗೆ ಸಿದ್ಧಿ ದೊರಕುವುದಿಲ್ಲ. ನಮ್ಮ ಭರಣ ಪೋಷಣ ವೃದ್ಧಿಯಲ್ಲಿ ತೊಡಗಿರುವ ಇನ್ದ್ರಾದಿಗಳನ್ನೇ ನಾವು ಸ್ತುತಿಸುತ್ತೇವೆ. ಗೋವು ಸದಾ ಶುಚಿ ಗೋವುಗಳ ಮೇಲೂ ನಾಗರಿಕರ ಮೇಲೂ ಆಕ್ರಮಣ ಮಾಡುವ ಶತ್ರುಗಳಿಗೆ ಇನ್ದ್ರನ ಸಹಾಯ ಪಡೆದಿರುವ ನಾವು ಸೂಕ್ತವಾಗಿ ಉತ್ತರಿಸುವೆವು.

ಜ್ಞಾನಿಯ ಸಂರಕ್ಷಣೆಯಲ್ಲಿರುವವರನ್ನು ಯಾರೂ ಬಗ್ಗಿಸಲಾರರು. ಪದೇ ಪದೇ ಬೇಡುತ್ತೇವೆಂದು ಇನ್ದ್ರನೇ ನೀನು ಕೋಪಿಸಿಕೊಳ್ಳುವೆಯೇಸು? ತಮ್ಮನ್ನು ರಕ್ಷಿಸುವ ಅಭಿವೃದ್ಧಿಗೊಳಿಸುವ ಒಡೆಯನನ್ನು ಯಾರು ತಾನೆ ಬೇಡು ವುದಿಲ್ಲ! ಹಾಲು ಕರೆಯುವ ತಾಯಿ ಹಸುವಿನೆಡೆಗೆ ಎಳೆಯ ಕರು ಹೋಗುವುದು ಸ್ವಾಭಾವಿಕವಷ್ಟೆ! ಒಂದೆಡೆ ಕುಳಿತು ಶ್ರದ್ಧಾಭಕ್ತಿಗಳಿಂದ ಭಗವಂತನನ್ನು ಪ್ರಾರ್ಥಿಸುತ್ತಿದ್ದರೆ ಸ್ವಸಾಮರ್ಥ್ಯವೂ ಜ್ಞಾನವೂ ವೃದ್ಧಿಸುತ್ತದೆ. ದಿನ ದಿನವೂ ತನ್ನನ್ನು ಶುದ್ಧವಾಗಿಟ್ಟುಕೊಳ್ಳುವವನು ತನಗೆ ಬರುವ ವಿಪತ್ತನ್ನೂ ಅನಿಷ್ಟವನ್ನೂ ಪಾಪವನ್ನೂ ದುರ್ಬುದ್ಧಿಯನ್ನೂ ರೋಗವನ್ನೂ ದೂರ ಮಾಡಿಕೊಳ್ಳುತ್ತಾನೆ. ಜ್ಞಾನಿಯಾದ ಸನ್ಮಿತ್ರನು ನಮ್ಮನ್ನು ಸನ್ಮಾರ್ಗದಲ್ಲಿ ಒಯ್ಯುತ್ತಾನೆ. ಪರರಿಗೆ ದ್ರೋಹವೆಸಗದವನನ್ನೂ ಒಳ್ಳೆಯ ನೀತಿವಂತನನ್ನೂ ದೇವತೆಗಳು ರಕ್ಷಿಸುತ್ತಾರೆ.

ಭೂಮಿಯು ಸುತ್ತುತ್ತಿರುವಂತೆ ಸೃಷ್ಟಿಸಲ್ಪಟ್ಟಿದೆ. ಚನ್ದ್ರಮಂಡಲದ ಮೇಲೆ ಸೂರ್ಯನ ಕಿರಣಗಳು ಬಿದ್ದಾಗ ಚನ್ದ್ರನು ಪ್ರಕಾಶಿಸುತ್ತಾನೆ. ಸರಸ್ವತಿಯು ಪವಿತ್ರಕಾರಕಳೂ ಬುದ್ಧಿಯನ್ನು ಚುರುಕುಗೊಳಿಸುವವಳೂ ಧನದಾತೃವೂ ಆಗಿದ್ದು ಅನ್ನವನ್ನು ನೀಡಿ ಬಲಯುತರನ್ನಾಗಿ ಮಾಡುತ್ತಾಳೆ. ಸಮಸ್ತ ಸಂರಕ್ಷಣ ಸಾಧನಗಳಿಂದ ಸಜ್ಜಾಗಿರುವ ಸಾಮರ್ಥ್ಯಶಾಲಿಯೂ ಐಶ್ವರ್ಯವಂತನೂ ಯಶೋವಂತನೂ ಶತ್ರುಗಳನ್ನು ನಿಗ್ರಹಿಸುವವನೂ ಆದ ಇನ್ದ್ರನ ಉಪಾಸಕ ರನ್ನು ಯಾರೂ ನಾಶಮಾಡಲಾರರು. ಭಗವಂತನಲ್ಲಿ ಶ್ರದ್ಧೆಯೇ ಇಲ್ಲದವನಿಗೆ ಉಪಾಸಕನೂ ಅಲ್ಲದವನಿಗೆ ಐಶ್ವರ್ಯದ ಪ್ರಾಪ್ತಿಯೇ ಇಲ್ಲ. ಯುದ್ಧದಲ್ಲಿ ಪಲಾ ಯನ ಮಾಡದೆ ಸ್ಥಿರವಾಗಿರುವವನು ಮಹಾಜ್ಞಾನಿಯೂ ಭಯವನ್ನು ದೂರ

ಮಾಡುವವನೂ ಆಗಿರುತ್ತಾನೆ. ಸಾಮರ್ಥ್ಯಶಾಲಿಯಾದ ಇನ್ದ್ರನನ್ನು ಒಟ್ಟಿಗೆ ಕುಳಿತು ಸ್ತೋತ್ರ ಮಾಡಿ.

ಧನದ ಒಡೆಯನೂ ಸರ್ವಜನರ ಹಿತಕ್ಕಾಗಿ ಕೆಲಸ ಮಾಡುವವನೂ ಬಲಯುತನೂ ಶತ್ರುಗಳ ಮೇಲೆ ಶಸ್ತ್ರಪ್ರಯೋಗಿಸುವವನೂ ಆದ ಇನ್ದ್ರನಿಗೆ ಈ ಎಲ್ಲವೂ ಅಧೀನವಾಗಿದೆ. ಸಮಸ್ತ ಶತ್ರುಗಳನ್ನೂ ನಾಶಮಾಡುವ ಸಣ್ಣಪುಟ್ಟ ದೊಡ್ಡ ಯುದ್ಧಗಳಲ್ಲೂ ನಮ್ಮ ಮಿತ್ರನಂತಿರುವ ಇನ್ದ್ರನನ್ನು ಸಹಾಯಕ್ಕೆ ಆಹ್ವಾನಿಸುತ್ತೇವೆ. ಸಹಸ್ರಭುಜದ ಶತ್ರುಗಳೊಡನೆ ಯುದ್ಧ ಮಾಡುವಾಗ ಇನ್ದ್ರನ ಕ್ರೋಧವೂ ಪಾರಕ್ರಮವೂ ಪ್ರಕಟವಾಗುತ್ತದೆ. ದೇವತೆಗಳಿಂದ ಒದಗಿಬರುವ ರಕ್ಷಣೆಯು ಬಹು ಮಹತ್ವದ್ದಾಗಿರುತ್ತದೆ.

ಪರ್ವತದ ತಪ್ಪಲುಗಳಲ್ಲೂ ನದಿಗಳ ಸಂಗಮ ಸ್ಥಾನಗಳಲ್ಲೂ ಶಾನ್ತವಾಗಿ ಕುಳಿತು ಬುದ್ಧಿಯನ್ನು ಸ್ಥಿರ ಮಾಡಿ ಮನಸ್ಸನ್ನು ಪರಮಾತ್ಮನಲ್ಲಿ ನಿಲ್ಲಿಸಿಕೊಂಡರೆ ಜ್ಞಾನಿಯಾಗುವನು. ನಾವು ನಮ್ಮನ್ನು ಪಾಲಿಸುವ ಸತ್ಯದ ಬುದ್ಧಿಯನ್ನು ಸ್ವೀಕರಿಸುವುದರಿಂದ ಸೂರ್ಯನಂತೆ ತೇಜಸ್ವಿಯಾಗುತ್ತೇವೆ. ಎಲ್ಲಾ ಮಾನವರಿಗೂ ಉತ್ತಮ ಪ್ರೇರಣೆಗಳುಂಟಾಗಲಿ. ಸಮಸ್ತ ಶತ್ರುನಾಶಕನೂ ನೂರಾರು ಕರ್ಮಗಳಲ್ಲಿ ತೊಡಗಿರುವವನೂ ಸಮಸ್ತರಿಗೂ ಶ್ರೇಷ್ಠನೂ ಆಗಿರುವ ಇನ್ದ್ರನನ್ನು ಸ್ತುತಿಸೋಣ. ಮಹಾತ್ಮನಾದ ಶ್ರೇಷ್ಠನಾದ ವಜ್ರಧಾರಿಯಾದ ಇನ್ದ್ರನ ಯಶಸ್ಸು ದ್ಯುಲೋಕದಷ್ಟು ವಿಸ್ತಾರವಾಗಿದೆ. ನಾವು ವೇದ ಮನ್ತ್ರಗಳಲ್ಲಿ ತಿಳಿಸಿರುವುದನ್ನು ಮಾತ್ರ ಆಚರಿಸುತ್ತೇವೆ. ಶಾಸ್ತ್ರ ವಿರುದ್ಧವಾದ ಹಾನಿಕಾರಕವಾದ ಕರ್ಮವನ್ನು ಆಚರಿಸುವುದಿಲ್ಲ. ಒಳ್ಳೆಯ ಹುಲ್ಲು ಗೋವಿಗೆ ಸಂತೋಷವನ್ನು ನೀಡುವಂತೆ ಸ್ತೋತ್ರಗಳು ಇನ್ದ್ರನಿಗೆ ಸಂತೋಷವನ್ನು ನೀಡುತ್ತವೆ. ನದಿಗಳು ಸಡಗರದಿಂದ ಸಮುದ್ರಕ್ಕೆ ಬಗ್ಗಿ ಹರಿಯುವಂತೆ ಸಮಸ್ತ ಪ್ರಜೆಗಳೂ ಸಡಗರದಿಂದ ಇನ್ದ್ರನಿಗೆ ಬಗ್ಗಿ ನಡೆಯುತ್ತಾರೆ.

ಆಗ ತಾನೆ ಈದ ಹಸುಗಳು ಕರುವಿನೆಡೆಗೆ ಹೋಗುವಂತೆ ನಮ್ಮ ಸ್ತೋತ್ರಗಳು ಇನ್ದ್ರನೆಡೆಗೆ ಹೋಗುತ್ತವೆ. ಹಾಲುಕೊಡುವ ಹಸುವನ್ನು ಸಕಾಲ

ದಲ್ಲಿ ಹಾಲು ಕರೆಯಲು ಕರೆತರುವಂತೆ ನಮ್ಮ ಸಂರಕ್ಷಣೆಗೆ ಇನ್ದ್ರನನ್ನು ಆಹ್ವಾನಿಸುತ್ತೇವೆ. ದ್ಯುಲೋಕದಷ್ಟೇ ಇನ್ದ್ರನ ಬಲವೂ ವಿಸ್ತಾರವಾಗಿದೆ. ನದಿಯು ಸಮುದ್ರವನ್ನು ಸೇರುವಂತೆ ಸೋಮರಸವು ಇನ್ದ್ರನನ್ನು ಸೇರುತ್ತದೆ. ಯಜಮಾನನು ಕುಶಲಕರ್ಮಿಗಳಿಗೆ ನೆರವಾಗುವಂತೆ ಇನ್ದ್ರನು ನಮಗೆ ನೆರವಾಗಲಿ. ಬೆಳೆಯನ್ನು ಬೆಳೆಯುವ ಹೊಲಗದ್ದೆಗಳಿಗೆ ಬಾವಿಯಿಂದ ನೀರನ್ನು ಎತ್ತಿಹಾಕಿ ತೋಯಿಸುವಂತೆ ಮಹಾತ್ಮನಾದ ಇನ್ದ್ರನನ್ನು ಸೋಮರಸದಿಂದ ತೋಯಿಸಿ ಈ ಹಸುಗಳು ಹಾಲು ಕೊಡಲು ಗೋಶಾಲೆಯಲ್ಲಿರುವ ಕರುವಿನ ಬಳಿಗೆ ಹೋಗುವಂತೆ ಸ್ತುತಿಕರ್ತರು ಶತ್ರುಹಂತಕನಾದ ಇನ್ದ್ರನ ಬಳಿಗೆ ಹೋಗುತ್ತಾರೆ. ಬಾಯಾರಿದ ಜಿಂಕೆ ಜಲಸ್ಥಾನಕ್ಕೆ ಹೋಗುವಂತೆ ಇನ್ದ್ರನು ಸ್ತುತಿಕರ್ತರೆಡೆಗೆ ಬರಲಿ. ಜನರು ಭಾಗ್ಯವಂತನನ್ನು ಆರಾಧಿಸುವಂತೆ ಯಶಸ್ವಿಯೂ ಧನವಂತನೂ ಆದ ಇನ್ದ್ರನನ್ನು ನಾವು ಆರಾಧಿಸುತ್ತೇವೆ. ನೀರು ಸೋಮರಸದೊಂದಿಗೆ ಬೆರೆಯುವಂತೆ. ನಾವು ನಿನ್ನೊಂದಿಗೆ ಬೆರೆಯುವೆವು. ಕಿರಣಗಳು ಸೂರ್ಯನನ್ನು ಆಶ್ರಯಿಸಿರುವಂತೆ ಪ್ರಪಂಚವು ಇನ್ದ್ರನನ್ನಾಶ್ರಯಿಸಿದೆ. ತಂದೆಯ ಐಶ್ವರ್ಯದಲ್ಲಿನ ಭಾಗವನ್ನು ಪುತ್ರನು ಅಪೇಕ್ಷಿಸುವಂತೆ ನಾವು ನಿನ್ನ ಐಶ್ವರ್ಯದಲ್ಲಿನ ಭಾಗವನ್ನು ಅಪೇಕ್ಷಿಸುತ್ತೇವೆ. ಬನ್ಧನದಲ್ಲಿರುವವನನ್ನು ಮುಕ್ತನನ್ನಾಗಿಸುವಂತೆ ನೀನು ನಮ್ಮನ್ನು ಬಂಧನದಿಂದ ಬಿಡುಗಡೆ ಮಾಡು. ರಥದ ಚಕ್ರಗಳು ಅಚ್ಚಿನ ಆಧಾರವನ್ನವಲಂಬಿಸಿರುವಂತೆ ದ್ಯುಲೋಕ ಪೃಥ್ವಿಲೋಕಗಳು ಇನ್ದ್ರನ ಆಧಾರವನ್ನವಲಂಬಿಸಿವೆ. ಬಿದಿರು ಬಹು ಎತ್ತರವಾಗಿದ್ದು ತನ್ನ ಅಸ್ತಿತ್ವವನ್ನು ಎಲ್ಲರಿಗೂ ತಿಳಿಸುವಂತೆಯೇ ಸ್ತುತಿಗಳು ಇನ್ದ್ರನ ಯಶಸ್ಸನ್ನು ಎಲ್ಲರಿಗೂ ತಿಳಿಸುತ್ತವೆ.

ಇನ್ದ್ರನೇ ಸೂರ್ಯನು ಅನ್ತರಿಕ್ಷವನ್ನೆಲ್ಲಾ ತನ್ನ ಕಿರಣಗಳಿಂದ ತುಂಬುವಂತೆ ನಿನ್ನ ಇನ್ದ್ರಿಯಗಳ ಶಕ್ತಿ ನಿನ್ನನ್ನು ಪೂರ್ಣವಾಗಿ ಆವರಿಸಿದೆ. ರಥದಲ್ಲಿ ಕುಳಿತಿರುವ ವೀರಪುರುಷನು ತನ್ನ ಗುರಿಯನ್ನು ತಲುಪುವಂತೆ ನಮ್ಮ ಸ್ತುತಿಗಳು ಇನ್ದ್ರನನ್ನು ತಲುಪುತ್ತವೆ. ರಥವನ್ನು ಚಾಲನೆ ಮಾಡುತ್ತಾ ನಮ್ಮ ಇಚ್ಛಿತ ಸ್ಥಾನವನ್ನು ತಲುಪುವಂತೆ ಇನ್ದ್ರನನ್ನು ಸ್ತುತಿಸುತ್ತಾ ಯಜ್ಞಕ್ಕೆ ಕರೆತರುತ್ತೇವೆ. ಪಾಪದಿಂದ ಪಾರಾಗುವಂತೆಯೇ ನಾವು ಶತ್ರುಗಳಿಂದಲೂ ಪಾರಾಗುತ್ತೇವೆ.

ಉಷಃಕಾಲವು ತನ್ನ ಪ್ರಕಾಶದಿಂದ ವಿಶ್ವವನ್ನೇ ತುಂಬುವಂತೆ ಭೂಲೋಕ ದ್ಯುಲೋಕಗಳನ್ನು ಇನ್ದ್ರನು ತನ್ನ ತೇಜಸ್ಸಿನಿಂದ ತುಂಬುತ್ತಾನೆ. ಪರ್ವತದಂತೆ ಬಹು ಉನ್ನತನಾದ ಇನ್ದ್ರನು ದ್ಯುಲೋಕದ ಒಡೆಯನಾಗಿದ್ದಾನೆ. ನೀರನ್ನು ತರುವ ಮಿತ್ರನು ನೀರಿನೊಂದಿಗೆ ಆಡುವಂತೆ ನಾವು ನಿನ್ನಲ್ಲಿಗೆ ಬರುತ್ತೇವೆ. ಅನ್ನಕ್ಕಾಗಿ ಮಗನು ತಂದೆಯಲ್ಲಿಗೆ ಬರುವಂತೆ ನಾವು ನಿನ್ನ ಬಳಿಸಾರುತ್ತೇವೆ. ವೀರಾಧಿವೀರರನ್ನು ಯುದ್ಧಕ್ಕೆ ಆಹ್ವಾನಿಸುವಂತೆ ನಿನ್ನನ್ನು ನಮ್ಮ ರಕ್ಷಣೆಗಾಗಿ ಆಹ್ವಾನಿಸುತ್ತೇವೆ. ಸೂರ್ಯನು ತನ್ನ ಕಿರಣಗಳಿಂದ ಹೊಳೆಯುವಂತೆ ಸೋಮ ರಸವು ತನ್ನ ತೇಜಸ್ಸಿನಿಂದ ಹೊಳೆಯುತ್ತದೆ. ನೂರಾರು ಸೂರ್ಯರೂ ನೂರಾರು ಭೂಮಿಗಳೂ ಸೃಷ್ಟಿಯಲ್ಲಿರುವ ಯಾವುದೂ ಇನ್ದ್ರಗೆ ಸರಿದೂಗಲಾರವು.

ಯಜ್ಞದಲ್ಲಿ ಎಲ್ಲರೂ ಒಂದು ಕಡೆ ಕುಳಿತು ಪರಸ್ಪರ ಮಿಳಿತವಾಗಿ ಸ್ತೋತ್ರ ಮಾಡುವುದನ್ನು ಕೇಳಲು ದ್ಯುಲೋಕದ ಒಡೆಯನಾಗಿರುವ ಇನ್ದ್ರನು ಆಗಮಿಸುತ್ತಾನೆ ಹಾಗೂ ನಮ್ಮ ಮಿತ್ರನೂ ಸಹಾಯಕನೂ ಆಗುತ್ತಾನೆ, ಪಕ್ಷಿಗಳು ಒಟ್ಟಾಗಿ ಒಂದು ಕಡೆ ಸೇರುವಂತೆ ನಾವೆಲ್ಲಾ ಪರಸ್ಪರ ಒಟ್ಟಾಗಿ ಸೇರಿ ನಮಸ್ಕರಿಸುತ್ತೇವೆ. ನಾವೆಲ್ಲರೂ ಒಟ್ಟಿಗೆ ಒಂದುಕಡೆ ಕುಳಿತು ಸ್ತೋತ್ರ ಮಾಡುವುದರಿಂದ ತೇಜಸ್ವಿಗಳೂ ಬಲಿಷ್ಠರೂ ಆಗುತ್ತೇವೆ. ತಾವು ಬಹುಬಲಿಶಾಲಿಯೆಂಬ ದರ್ಪದಿಂದಲೂ ಅಹಂಕಾರದಿಂದಲೂ ವಿನಾಶಕ ಶಸ್ತ್ರಾಸ್ತ್ರಗಳಿಂದಲೂ ಕ್ರೂರಕರ್ಮಿಗಳ ಸಹಾಯದಿಂದಲೂ ಆಕ್ರಮಿಸುವ ಶತ್ರುಗಳನ್ನು ನಾವೆಲ್ಲಾ ಒಟ್ಟಾಗಿ ಗಟ್ಟಿ ಮನಸ್ಸು ಮಾಡಿ ಇನ್ದ್ರನ ಸಹಾಯ ಪಡೆದು ಸಂಹರಿಸುವೆವು.

ಮಹಾಮಹಿಮನಾದ ಇನ್ದ್ರನನ್ನು ಬಗೆಬಗೆಯಾಗಿ ಸ್ತೋತ್ರ ಮಾಡುವ ಕೆಲವು ಮನ್ತ್ರಗಳ ಅರ್ಥ ಹೀಗಿದೆ - ಬಗೆಬಗೆಯಾಗಿ ಹಿಂಸಿಸುವ ಶತ್ರುಗಳನ್ನು ನಾಶಮಾಡುವ ಇನ್ದ್ರನನ್ನು ಭಕ್ತಿಯಿಂದ ಸತ್ಕರಿಸಿ ಅವನ ಯಶಸ್ಸನ್ನು ತುಂಬು ಹೃದಯದಿಂದ ಗಾನಮಾಡಿ. ರಥಿಕರ ಮುಂದಾಳೂ ಬಲದ ಒಡೆಯನೂ ಬಹುಪರಾಕ್ರಮಿಯೂ ಆದ ಇನ್ದ್ರನ ಸಮುದ್ರದಷ್ಟು ವಿಶಾಲವಾದ ಯಶಸ್ಸನ್ನು

ಪರಿಪರಿಯಾಗಿ ಸ್ತುತಿಸಿ. ವ್ಯರ್ಥವಾಗಿ ಸಮಯವನ್ನು ಕಳೆಯದೆ ಇನ್ದ್ರನನ್ನು ಹೇಗೆ ತಿಳಿದಿದ್ದೇವೆಯೋ ಹಾಗೆಯೇ ಸ್ತುತಿಸಬಹುದು. ಧರ್ಮ ಸಂರಕ್ಷಕನೂ ಬಲದ ಒಡೆಯನೂ ಸಮಸ್ತ ಶತ್ರುಸಂಹಾರಕನೂ ಎಲ್ಲರ ಮುಖಂಡನೂ ಆಗಿರುವ ಇನ್ದ್ರನೊಬ್ಬನೇ ಅತಿಥಿಯಂತೆ ಪೂಜ್ಯನೂ ಸತ್ಕಾರಯೋಗ್ಯನೂ ಆಗಿದ್ದಾನೆ. ವಜ್ರಧಾರಿಯೂ ಶೂರನೂ ವೀರನೂ ಪರಾಜಿತನಾಗದವನೂ ವಿಜಯಿಯೂ ಮಹಾತ್ಮನೂ ಯುದ್ಧದಲ್ಲಿ ಯಾರಿಗೂ ಬಗ್ಗದವನೂ ಆದ ಇನ್ದ್ರ ಎಂದು ಪದೇ ಪದೇ ಆವೃತ್ತಿಯಗುವ ಪದಪುಂಜಗಳು ನಮ್ಮಲ್ಲೂ ಆ ಗುಣಗಳನ್ನು ಜಾಗೃತಗೊಳಿಸಬಹುದೆಂಬ ಪ್ರಯತ್ನವೇ ಸ್ತುತ್ಯ. ಉಪಾಸಕರು ಇನ್ದ್ರನನ್ನು ಉಪಾಸಿಸುತ್ತಾರೆ ಸಾಮಗಾಯಕರು ಇನ್ದ್ರನನ್ನು ಸಂತೋಷಪಡಿಸುವುದಕ್ಕಾಗಿಯೇ ಬೃಹತ್ಸಾಮಾದಿಗಳನ್ನು ಗಾನ ಮಾಡುತ್ತಾರೆ. ಸಮಸ್ತ ಭಯದಿಂದಲೂ ಕಾಪಾಡುವ ಮಿತ್ರನಂತೆ ವ್ಯವಹರಿಸುವ ತಂದೆತಾಯಿಗಳಂತೆ ಸದಾ ನಮ್ಮ ಉತ್ಕರ್ಷಕ್ಕಾಗಿ ದೂರದಲ್ಲೂ ಹತ್ತಿರದಲ್ಲೂ ಇದ್ದು ನೆರವಾಗುವ ಮಹಾಪುರುಷನ ಮಹಿಮೆಯನ್ನುತಾನೇ ವರ್ಣಿಸಲಾಗುತ್ತದೆಯಷ್ಟೆ.

ಮೂರನೆಯದಾದ ಐನ್ದ್ರಗಾನವು ಅಥವಾ ಐನ್ದ್ರಪರ್ವವು ಅಥವಾ ಐನ್ದ್ರಕಾಂಡವು ಮುಗಿದಿದೆ. ನಾಲ್ಕನೆಯ ಅಧ್ಯಾಯ ಮುಗಿದಿದೆ.

ಪಾವಮಾನ ಕಾಂಡವು, ಮುಂದಿನ ಸಂಪುಟದಲ್ಲಿ ಪ್ರಾರಂಭವಾಗುತ್ತದೆ.

ಭವ್ಯ ಸಿಂಹಾಸನದಿ ಕುಳಿತು ನೀನಾಲಿಸಿದೆ
ನೀನೇ ರಚಿಸಿದ ವಿಶ್ವಗೀತೆಗಳನು
ನಿನ್ನ ಮನೆಬಾಗಿಲಲಿ ಮರ್ತ್ಯಸಂಭವ ನಾನು
ನನ್ನ ಆರ್ತಸ್ವರದಿ ಹಾಡುತಿಹೆನು
ಸೂರ್ಯ ಚಂದ್ರರು ನಿಂತು ಹಾಡುವೀ ಸಭೆಯಲ್ಲಿ
ನಾನೂ ಕೂಡ ನಿನ್ನ ನುತಿಗೈವೆನು.

॥ ಓಮ್ ॥

# ಆಧಾರ ಗ್ರಂಥ ಸಂಕೇತ ಸೂಚಿ

ಅಮರ - ಅಮರಕೋಶ

ಅ.ತ. - ಅಕ್ಷರ ತನ್ತ್ರ

ಅಥ.ವೇ - ಅಥರ್ವವೇದ

ಆರ - ಆರಣ್ಯಗೇಯಗಾನ

ಆಪ.ಶ್ರೌ - ಆಪಸ್ತಮ್ಬ ಶ್ರೌತಸೂತ್ರ

ಆರ್ಷೇ.ಕಲ್ಪ. - ಆರ್ಷೇಯ ಕಲ್ಪಸೂತ್ರ

ಆರ್ಷೇ.ಬ್ರಾ. - ಆರ್ಷೇಯ ಬ್ರಾಹ್ಮಣ

ಆರ್ಷೇ.ದೀ - ಆರ್ಷೇಯ ದೀಪ

ಆಶ್ವ.ಗೃ.ಸೂ. - ಆಶ್ವಲಾಯನ ಗೃಹ್ಯಸೂತ್ರ

ಊಹ - ಊಹಗಾನ

ಸಾ.ಋ - ಸಾಮವೇದ ಛನ್ದಾರ್ಚಿಕಾ

ಜಯಚಾಮರಾಜೇಂದ್ರ ವೇದರತ್ನಮಾಲಾ - ೩೬ ಸಂಪುಟಗಳು

ಋ.ಸಂ. - ಋಗ್ವೇದ ಸಂಹಿತೆ

ಋ.ತ - ಋಕ್ ತನ್ತ್ರ

ಋ.ಪ್ರಾತಿ - ಋಗ್ವೇದ ಪ್ರಾತಿಶಾಖ್ಯ

ಐ.ಆ - ಐತರೇಯ ಆರಣ್ಯಕ

ಐ.ಬ್ರಾ - ಐತರೇಯ ಬ್ರಾಹ್ಮಣ

ಕಾ.ಶ್ರೌ - ಕಾತ್ಯಾಯನ ಶ್ರೌತಸೂತ್ರ

ಕ್ಷು.ಕ.ಸೂ. - ಕ್ಷುದ್ರ ಕಲ್ಪಸೂತ್ರ

ಖಾ.ಗೃ.ಸೂ - ಖಾದಿರ ಗೃಹ್ಯಸೂತ್ರ

ಗಾಯ.ವಿ.ಸೂ - ಗಾಯತ್ರೀ ವಿಧಾನಸೂತ್ರ

ಗ್ರಾಮ - ಗ್ರಾಮಗೇಯಗಾನ

ಗೋಪ.ಬ್ರಾ - ಗೋಪಥ ಬ್ರಾಹ್ಮಣ

ಗೋಭಿ.ಗೃ.ಸೂ - ಗೋಭಿಲ ಗೃಹ್ಯಸೂತ್ರ

ಗೌ.ಧ.ಸೂ - ಗೌತಮ ಧರ್ಮಸೂತ್ರ

ಗೌ.ಶಿ - ಗೌತಮ ಶಿಕ್ಷಾ

ಛಂ.ವಿ - ಛನ್ದೋ ವಿಚಿತಿ

ಛಾಂ.ಉ - ಛಾನ್ದೋಗ್ಯೋಪನಿಷತ್

ಛಾಂ.ಬ್ರಾ - ಛಾನ್ದೋಗ್ಯ ಬ್ರಾಹ್ಮಣ

ಜೈ.ಆ.ಬ್ರಾ - ಜೈಮಿನೀಯ ಆರ್ಷೇಯ ಬ್ರಾಹ್ಮಣ

ಜೈ.ಉ.ಬ್ರಾ - ಜೈಮಿನೀಯ ಉಪನಿಷತ್ ಬ್ರಾಹ್ಮಣ

ಜೈ.ನ್ಯಾ.ವಿ. - ಜೈಮಿನೀಯ ನ್ಯಾಯಮಾಲಾ ವಿಸ್ತರ

ಜೈ.ಬ್ರಾ - ಜೈಮಿನೀಯ ಬ್ರಾಹ್ಮಣ

ಜೈ.ಮೀ.ಸೂ - ಜೈಮಿನೀ ಮೀಮಾಂಸಾಸೂತ್ರ

ತಾಂ.ಮ.ಬ್ರಾ - ತಾಣ್ಡ್ಯಮಹಾಬ್ರಾಹ್ಮಣ

ತೈ.ಆರ - ತೈತ್ತಿರೀಯ ಆರಣ್ಯಕ

ತೈ.ಉಪ - ತೈತ್ತಿರೀಯೋಪನಿಷತ್ತು

ತೈ.ಪ್ರಾತಿ - ತೈತ್ತಿರೀಯ ಪ್ರಾತಿಶಾಖ್ಯ

ತೈ.ಬ್ರಾ - ತೈತ್ತಿರೀಯ ಬ್ರಾಹ್ಮಣ

ತೈ.ಸಂ. - ತೈತ್ತಿರೀಯ ಸಂಹಿತಾ

ದೇ.ಬ್ರಾ - ದೇವತಾಧ್ಯಾಯ ಬ್ರಾಹ್ಮಣ

ದೇ.ಭಾ - ದೇವೀ ಭಾಗವತ

ದ್ರಾಹ್ಯಾ.ಶ್ರೌ. - ದ್ರಾಹ್ಯಾಯಣ ಶ್ರೌತಸೂತ್ರ

ನಾ.ಶಿ - ನಾರದೀಯ ಶಿಕ್ಷಾ

ನಾ.ಪು - ನಾರದ ಪುರಾಣ

ನಿ.ಸೂ - ನಿದಾನಸೂತ್ರ

ನಿರು - ನಿರುಕ್ತ

ಪಂ.ವಿ.ಸೂ - ಪಂಚವಿಧಸೂತ್ರ

ಪತ.ಭಾ - ಪತಂಜಲೀ ಭಾಷ್ಯ

| | | | | | |
|---|---|---|---|---|---|
| ಪಾಣಿನಿ | - | ಪಾಣಿನೀಯ ಅಷ್ಟಾಧ್ಯಾಯೀ | ರಹ | - | ರಹಸ್ಯ/ ಊಹ್ಯ ಗಾನ |
| ಪಾ.ಶಿ | - | ಪಾಣಿನೀಯ ಶಿಕ್ಷಾ | ಲ.ಋ | - | ಲಘು ಋಕ್ ತನ್ತ್ರ |
| ಪು.ಸೂ | - | ಪುಷ್ಪ ಸೂತ್ರ | ಲಾ.ಶ್ರೌ | - | ಲಾಟ್ಯಾಯನ ಶ್ರೌತಸೂತ್ರ |
| ಪ್ರ.ಉಪ | - | ಪ್ರಶ್ನ ಉಪನಿಷತ್ತು | ಲೋ.ಶಿ | - | ಲೋಮಶೀ ಶಿಕ್ಷಾ |
| ಪ್ರತಿ.ಸೂ | - | ಪ್ರತಿಹಾರ ಸೂತ್ರ | ವಾಜ ಪ್ರಾತಿ | - | ವಾಜಸೇನೀಯ ಪ್ರಾತಿಶಾಖ್ಯ |
| ಬ್ರ.ಸೂ | - | ಬ್ರಹ್ಮಸೂತ್ರ ಶಾಂಕರಭಾಷ್ಯ | ವಾ.ರಾ | - | ವಾಲ್ಮೀಕಿ ರಾಮಾಯಣ |
| ಬೃಹ.ಉ | - | ಬೃಹದಾರಣ್ಯಕ ಉಪನಿಷತ್ತು | ವಿ | - | ವಿವರಣಕಾರಃ |
| ಬೋ.ಶ್ರೌ | - | ಬೋಧಾಯನ ಶ್ರೌತಸೂತ್ರ | ಶತ.ಬ್ರಾ | - | ಶತಪಥ ಬ್ರಾಹ್ಮಣ |
| ಭ.ಗೀ | - | ಭಗವದ್ಗೀತೆ - ಶಾಂಕರಭಾಷ್ಯ | ಶಾಂ.ಗೃ.ಸೂ | - | ಶಾಂಖಾಯನ ಗೃಹ್ಯಸೂತ್ರ |
| ಭಾ.ಶಿ | - | ಭಾರದ್ವಾಜ ಶಿಕ್ಷಾ | ಶಿ.ಸಂ | - | ಶಿಕ್ಷಾ ಸಂಗ್ರಹ |
| ಮನು | - | ಮನುಸ್ಮೃತಿ | ಶಿ.ಪು | - | ಶಿವ ಪುರಾಣ |
| ಮ.ಭಾ | - | ಮಹಾಭಾರತ | ಷ.ವಿಂ.ಬ್ರಾ | - | ಷಡ್ವಿಂಶ ಬ್ರಾಹ್ಮಣ |
| ಮಾಧವ | - | ಮಾಧವರ ಸಾಮಸಂಹಿತಾ ಭಾಷ್ಯ | ಸಂ.ಉ.ಬ್ರಾ | - | ಸಂಹಿತೋಪನಿಷತ್ ಬ್ರಾಹ್ಮಣ |
| ಮಾಂ.ಉಪ | - | ಮಾಂಡೂಕ್ಯೋಪನಿಷತ್ತು | ಸಾ.ಆ.ದೀ | - | ಸಾಮವೇದ ಆರ್ಷೇಯ ದೀಪ |
| ಮಾ.ಲ | - | ಮಾತ್ರಾ ಲಕ್ಷಣ | ಸಾಮ.ತ | - | ಸಾಮ ತನ್ತ್ರ |
| ಮಾ.ಶಿ | - | ಮಾಣ್ಡೂಕೀ ಶಿಕ್ಷಾ | ಸಾ.ಗಾ | - | ಸಾಮಗಾನ |
| ಮು.ಉಪ | - | ಮುಣ್ಡಕೋಪನಿಷತ್ತು | ಸಾ.ಸಂ | - | ಸಾಮವೇದ ಸಂಹಿತೆ |
| ಮೈ.ಸಂ | - | ಮೈತ್ರಾಯಣಿ ಸಂಹಿತಾ | ಸಾ.ಸ | - | ಸಾಮಸಪ್ತ ಲಕ್ಷಣ |
| ಯಜು | - | ಯಜುರ್ವೇದ | ಸಾ.ವಿ.ಬ್ರಾ | - | ಸಾಮವಿಧಾನ ಬ್ರಾಹ್ಮಣ |
| ಯಾಜ್ಞ.ಶಿ | - | ಯಾಜ್ಞವಲ್ಕ್ಯ ಶಿಕ್ಷಾ | ಸ್ತೋ.ಸಂ | - | ಸ್ತೋಭಾನು ಸಂಹಾರ |
| | | | ವಂ.ಬ್ರಾ | - | ವಂಶಬ್ರಾಹ್ಮಣ |

**ಸಹಾಯಕ ಗ್ರಂಥ ಋಣ :**

ಸಾಮಗಾನ - ಡಾ|| ಪಂಕಜಮಾಲಾ ಶರ್ಮಾ
ದಿ ಸಾಮನ್ ಚಾಂಟ್ಸ್ - ಡಾ|| ಜಿ.ಹೆಚ್.ತರ್ಲೇಕರ್
ಸೀಕ್ರೆಟ್ ಆಫ್ ದಿ ವೇದಾಸ್ ಮತ್ತು ಮಿಸ್ಟಿಕ್ ಫೈರ್ - ಅರಬಿನ್ದೋ
ವೇದಾರ್ಥ ಪಾರಿಜಾತ - ಸ್ವಾಮಿ ಕರಪಾತ್ರೀಜೀ
ವೇದಿಕ್ ಬಿಬ್ಲಿಯೋಗ್ರಫಿ - ಬಿ.ಓ.ಆರ್.ಐ.ಪುಣೆ

# ಈ ಗ್ರಂಥ ಕುರಿತು ........

ಸಾಮವೇದದ ತತ್ತ್ವ ಮತ್ತು ಪ್ರಯೋಗಗಳನ್ನು ಒಟ್ಟಾಗಿ ಉಜ್ಜೀವನಗೊಳಿಸುವ ತುಡಿತವೇ ದ್ರಾಹ್ಯಯಣ ಪ್ರತಿಷ್ಠಾನದ ಪ್ರಕೃತೋದ್ಯಮದಲ್ಲಿ ಎದ್ದು ಕಾಣುವ ವಿಶೇಷತೆ.... ಕೃತ್ಸ್ನದೃಷ್ಟಿಯ ರಸಫಲವನ್ನೇ ಪ್ರಕೃತ ಸಾಮವೇದ ಸಂಪುಟಗಳಲ್ಲಿ ಕಾಣಬಹುದು. ಆದುದರಿಂದಲೇ ಇದು ಕರ್ಮ ಜ್ಞಾನ ಉಪಾಸನೆಗಳೆಂಬ ಕಾಂಡತ್ರಯಾಭಿಮಾನಿಗಳಿಗೂ ಸಮಾನವಾಗಿ ಆದರಣೀಯವಾಗಿದೆ.

–ಶತಾವಧಾನಿ ಡಾ॥ ಆರ್. ಗಣೇಶ್

ಶಬ್ದಾತೀತನು ಶಬ್ದವೆನಿಸಿದ ವೇದದ ಒಡಲಿನಲ್ಲೇ ಇರುತ್ತಾ ಸಾಮವೇದವು ಶಬ್ದದಾಚೆಯ ಅನುಭವೈಕವೇದ್ಯನಿಗೆ ಹೊಸ್ತಿಲಿನಂತೆ ಇದ್ದು ಶಬ್ದದ ಈಚಿನ ಲೋಕಕ್ಕೂ ಅವನಿಗೂ ಕೊಂಡಿಯಂತಿರುವುದೇ ವಿಶೇಷ. ಇಷ್ಟು ಮುಖ್ಯವಾದ ಸಾಮವೇದ ಸಂಹಿತೆಯ ಈ ಸಂಪುಟಗಳನ್ನು ಹೊರತರುತ್ತಿರುವುದು ಭಗವಂತನ ವಿಶೇಷ ಅನುಗ್ರಹದಿಂದಲೇ. ಈ ಪ್ರೇರಣೆಯೇ ದಿವ್ಯ ಅತಿ ಮಾನುಷ ಋಷಿಪ್ರೇರಿತ...

–ಪ್ರೋ॥ ಕೆ.ಎಸ್.ನಾರಾಯಣಾಚಾರ್ಯ

ಸಾಮಗರ ಉಪಕಾರಕ್ಕಾಗಿ ಪ್ರಧಾನವಾಗಿಯೂ ಇತರ ಶಾಖಿಗಳ ಜ್ಞಾನಾಭಿವೃದ್ಧಿಗಾಗಿಯೂ ಪ್ರಸ್ತುತ ಕನ್ನಡದಲ್ಲಿ ಪ್ರಥಮವಾಗಿ ಪ್ರಕಾಶವಾಗುತ್ತಿರುವ ಸಾಮವೇದ ಸಂಹಿತೆಯು ಸಮಗ್ರವಾದ ಸ್ವರಸಹಿತ ಋಕ್, ಪದಪಾಠ, ಗಾನಕ್ರಮ ವಿನ್ಯಾಸಗಳೊಂದಿಗೂ ಸಾಯಣಭಾಷ್ಯ ಪ್ರತಿಪದಾರ್ಥ ಭಾವಾನುವಾದ,ಪದ್ಯಾನುವಾದಗಳೊಂದಿಗೂ ಹೊರಬರುತ್ತಿರುವುದು ಬಹಳ ಸ್ವಾಗತಾರ್ಹ.

–ವೇದವಾರಿಧಿ ಡಾ॥ ಪಿ. ರಾಮಾನುಜನ್